श्रीगुरुभ्यो नमः

**पं. श्री मणिद्राविडशास्त्रिणः**

**विद्वद्भिः सेवितः सद्भिः नित्यमद्वेषरागिभिः ।**

**हृदयेनाभ्यनुज्ञातो यस्तं धर्मं निबोधत ।**

'यं त्वार्याः क्रियमाणं प्रशंसन्ति स धर्मः , यं गर्हन्ते सोऽधर्मः' इत्यादिभिः मन्वापस्तम्बादिवचनैः शिष्टाः धर्मबुद्ध्या यं सदाचारं परिपालयन्ति स एव धर्मः, इति स्पष्टमवगम्यते । प्रत्यक्षवचनानुपलम्भेऽपि शिष्टाचारस्यैव धर्माधर्म-प्रामाण्यं मीमांसकैः स्पष्टं निरूपितमेव । किञ्च मीमांसकाः स्मृतिवचनानां श्रुतिमूलकत्वेन धर्माधर्म प्रामाण्यम् आतिष्ठमानाः तेषां श्रुतिमूलकत्वज्ञापकतया शिष्टपरिगृहीतत्वमेव पुरस्कुर्वन्ति । शिष्टपरिग्रहाभावे स्मृतिवचनस्य श्रुति-मूलकत्वासिद्धेः प्रामाण्यं धर्मे नैवाङ्गीकुर्वन्ति । सति चैवं विदेशगमनाद्याचारस्य शिष्टैरपरिग्रहात् प्रत्युत शिष्टगर्हितत्वात् अधर्मत्वावगमः सुलभः। किञ्च तत्र प्रायश्चित्तादिना पारलौकिकफलहेतु दोषापगमेऽपि ऐहिकाशुद्धिपरिहाराभावस्य 'द्विजस्याब्धौ तु नौयातुः शोधितस्यापि सङ्ग्रहः' इति कलिवर्ज्यप्रकरणधृतवचनात् शिष्टाचाराच्चावगतेः धर्मानुष्टानेषु सर्वेषु तादृशानां निरङ्कुशाधिकारः न सम्भवति ।

**'सामान्यविधिरस्पष्टः संह्रियेत विशेषतः ।**
**स्पष्टस्य तु विधेर्नान्यैरुपसंहारसम्भवः ॥'** इति

सर्वप्रदानाधिकरणगतवार्तिके – स्पष्टतवं नामानुष्ठानाय विशेषापेक्षत्वम्, अनिर्धारितविशेषतया विशेषान्वययोग्यत्वं वा, तदभावः अस्पष्टत्वम् । यथा 'अग्नीषोमीयं पशुमालभेत' इति सामान्यवचनस्य 'छागस्य वपाया मेदसः' इति मन्त्रवर्णावगतविशेषे उपसंहारः, यथा वा 'पुरोडशं इति चतुर्धाकरोति' इति सामान्यवचनस्य 'आग्नेयं चतुर्धा करोति' इति विशेषवचनेनोपसंहारः उक्तवार्तिकस्य विषयः । 'नहिंस्यात् सर्वा भूतानि' इत्यत्र तु सर्वपदोपादानेन निर्धारितविशेषत्वादेव नास्पष्टत्वमिति 'न ब्राह्मणं हन्यात्' इति वचनेन तदुपसंहारो न सम्भवति । एवमेव 'मुण्डनं चोपवासश्च सर्वतीर्थेष्वयं विधिः' इति वचनस्यापि 'प्रयोगे वपनं कुर्यात्' इति वचनेन नोपसंहारः इति स्पष्टं मन्त्राधिकरणे शम्भुभट्टप्रणीत भाट्टदीपिका-व्याख्यायां प्रभावत्र्याम् ।

अतश्च 'समुद्रयानं न कार्यम्' इति वचनस्य अनुष्ठानाय विशेषापेक्षत्वरूपास्पष्टत्वाभावात् 'न नौयानेन समुद्रयात्रा कर्तव्या' इति वचनेन नोपसंहार सम्भवः ।

अत्र विशेषविचारं कर्तुमिदानीं ममावकाशो न लब्ध इति एतावतैव स्वाशयं प्रकाश्योपरम्यते ।

भावत्कः

**मणिद्राविडः**

श्रीगुरुभ्यो नमः

## ग्रन्थकर्तुर्निवेदनम्

**आपादमौलिपर्यन्तं गुरूणां आकृतिं स्मरेत् ।**
**तेन विघ्नाप्रणश्यन्ति सिद्धन्ति च मनोरथाः ।।**

शिष्टानामाचारो हि परमं प्रमाणम्, यदनुसृत्यैव वाक्यतात्पर्यनिर्णयः। विदेशगन्तुरपरिग्रहे मणिमञ्जर्युक्तेतिहासोऽपि अवश्यमनुसन्धेयः । **दुष्टदेशे चिरावासात् नाग्रहीत् दोषशंकया**। दुर्वादिनः ततोऽप्युत्सादनेच्छया विदेशं गतस्य नारायणभट्टस्य कुमारिलभट्टेनापरिग्रहो हि तत्रोक्तः।। केचित् दोष निश्चायकयोः दुष्टदेशगमनचिरावासयोः सद्भावे कथमियमाशङ्का इति अतिष्ठन्ते। अकारप्रश्लेषे अल्पकालवासस्य यत्किञ्चिदन्यस्य वा प्रतिबन्धस्य भावेन भट्टकुमारस्य मानसी शङ्का सम्भाविता । निश्चये संशये वाऽपरिग्रहस्यैव फलत्वात् यत्किञ्चिदेतत् ।एतद् ग्रन्थरचनायां स्वोपलब्धप्रामाणानां सम्प्रदानेन बहूपकृतवद्भ्यः विद्वद्भ्यः नमःशतानि धन्यवादाश्च अर्पयामः । सादरं प्रयत्नसंपोषणेन लेखनदातृणां तथा आशीर्वक्तृणां चोपकारं स्मारं स्मारं कार्तज्ञपूर्वकं स्मरामः ।।

ग्रन्थपतिपाद्यधर्ममूर्तेः भगवतः **श्रीकृष्णस्य** परमानुग्रहेण सात्विकजनानां धर्मपरिपालनशक्तिः अभिवर्धतां इत्यस्मदुपास्यं धर्मादर्शवपुषां परमपूज्य पण्डितराज **जालिहाळ श्रीनिवासाचार्यणां** तथा प्रातः स्मरणीय **श्रीसत्यध्यानश्रीचरणानां** अन्तर्यामिणं श्रीमदानन्दतीर्थ भगवत्पादाचार्यहृन्मन्दिरमन्दिरं भारतीरमण मुख्यप्राणान्तर्गतं अनन्तरूपधरं श्रीलक्ष्मीहयास्यं प्रार्थयामहे ।।

इति विद्वज्जनविधेयः ।

**ताम्रपर्णी श्रीनिवासाचार्यः**

॥ ಶ್ರೀ ಗುರುರಾಜೋ ವಿಜಯತೇ ॥

- ಮ॥ಶಾ॥ಸಂ॥ ಪಂ. ಶ್ರೀಬಾಳಗಾರು ಶ್ರೀನಿವಾಸಾಚಾರ್ಯರು

'ಸತ್ಕರ್ಮಕ್ಷೇತ್ರನಿರ್ಣಯ' ಎಂಬ ಈ ಕೃತಿಯು ನೋಡುವ - ಓದುವ - ವಿಮರ್ಶಿಸುವ ಸಜ್ಜನರಿಗೆಲ್ಲ ಮೈಪುಳಕದೊಡನೆ ಹೃದಯಕ್ಕೆ ಆಹ್ಲಾದ ನೀಡುತ್ತಾ, ಆತ್ಮಸಂತೃಪ್ತಿಯನ್ನು ನೀಡುತ್ತಿದೆಯೆಂಬುದಾಗಿ ನಮ್ಮ ಉತ್ಸಾಹಭರಿತವಾದ ಹರ್ಷೋದ್ಗಾರವಾಗಿದೆ. ಟೀಕಾರಾಯರು - ವ್ಯಾಸರಾಜರು - ಶ್ರೀರಾಘವೇಂದ್ರರು - ಶ್ರೀಸತ್ಯಧ್ಯಾನತೀರ್ಥರು ಈ ಮಹನೀಯರ ಚರಿತ್ರೆಯೇ ಒಂದು ಧರ್ಮಶಾಸ್ತ್ರದ ಆಕರವೆಂಬುದಾಗಿ ಹೇಳುತ್ತ ಈ ಕೃತಿಯು ಆರಂಭಗೊಂಡಿರುವುದು, ಶ್ರೀಹರಿ - ಗುರು - ಭಕ್ತಿಗೆ ಪ್ರತೀಕವೆಂದಷ್ಟೆ ಅಲ್ಲದೆ, ಇವತ್ತಿನ ಕುಯುಕ್ತಿ - ಕುಚೋದ್ಯಗಳ ವಿಚಾರಕ್ಕೆ ನೇರ ವಿಮರ್ಶೆಯಾಗಿದೆ. ಕರ್ಮಭೂಮಿಯನ್ನು ತೊರೆದು ಅನ್ಯತ್ರ ತತ್ವಪ್ರಚಾರದ ಉದ್ದೇಶಕ್ಕಾಗಿ ಈ ಯಾವ ಮಹನೀಯರೂ ಪ್ರಯತ್ನಿಸಲಿಲ್ಲವೆಂಬುದೇ ಈ ಮಾತಿನಲ್ಲಿ ಗಮನಿಸಬೇಕಾದ ಪ್ರಕೃತಸಂಗತ ಸಂಗತಿಯಷ್ಟೆ. ವಿದೇಶಗಮನ ಸಮುದ್ರೋಲ್ಲಂಘನ - ಇತ್ಯಾದಿ ನಿಷಿದ್ಧವಾದ ಕೃತ್ಯಗಳನ್ನು ತಪ್ಪೆಂದು ಮನಃಪೂರ್ವಕ ಒಪ್ಪಿಯೂ, ಪ್ರಮಾಣಗಳ ಸಂಗ್ರಹ-ವಿಮರ್ಶೆ ಇತ್ಯಾದಿಗಳಲ್ಲಿ ಕೊರತೆಯಿಂದ ಮೂಕರಾದಂತಾಗಿ ಒಳಗೊಳಗೇ ಗುಡು-ಗುಡು ನಡುಗುವ ಸಾತ್ವಿಕ ವಿದ್ವಾಂಸರ ಮುಖವಿಕಾಸಕ್ಕಾಗಿ, ಪ್ರಾಚೀನ ಸಂಪ್ರದಾಯಾದಿಗಳನ್ನು ಅವಹೇಳನ ಮಾಡುವ ಬುದ್ಧಿಜೀವಿಗಳೆಂಬ ಹಣೆಪಟ್ಟಿ ತೊಟ್ಟು ಅಟ್ಟಹಾಸಗೈವ ದುರಭಿಮಾನಿಗಳ ಮದವಿಳಿಸುವುದಕ್ಕಾಗಿ ಸಕಾಲದಲ್ಲಿ ಈ ಕೃತಿಯು ಅವತರಿಸಿ ಬರುತ್ತಿದೆಯೆಂಬುದು ಅತ್ಯಂತ ಸಂತಸದ ವಿಚಾರ.

ಈ ಕೃತಿಯಲ್ಲಿ ದೇಶ-ವಿದೇಶಗಳ ಸ್ವರೂಪನಿರ್ಣಯ, ಕರ್ಮಕ್ಷೇತ್ರಶಬ್ದಾರ್ಥ, ಅಧಿಕಾರಿ-ಅನಧಿಕಾರಿ ಸ್ವರೂಪವಿಚಾರ, ವಿದೇಶಗಮನದಿಂದ ಉಂಟಾಗುವ ಪಾತಿತ್ಯಾದಿಗಳ ವಿಮರ್ಶೆ ಹೀಗೆ ಬಹಳಷ್ಟು ಪ್ರಕರಣಗಳು ಬಹುಸುಂದರವಾಗಿ ಮೂಡಿಬಂದಿವೆ. ಈ ವಿಚಾರದಲ್ಲಿ ಈ ಕೆಳಕಂಡಂತೆ ಕೆಲವು ಗಮನಿಸಬೇಕಾದ ಸಂಗತಿಗಳಿರುತ್ತದೆ.

ಭೂಮಿಯಲ್ಲಿ ಪಾಪದೇಶ-ಪುಣ್ಯದೇಶ ಎಂಬ ವಿಂಗಡನೆ ಉಂಟೆ ?

ಹೌದು. ಬೃಹದಾರಣ್ಯಕದಲ್ಲಿ - ಸಾವಾ ಏಷಾ ದೇವತಾ ಏತಾಸಾಂ ಪಾಪ್ಮಾನಂ ಮೃತ್ಯುಮಪಹತ್ಯ ಯತ್ರಾಸಾಂ ದಿಶಾಮಂತಸ್ತದ್ಗಮಯಾಂಚಕಾರ ತದಾಸಾಂ ಪಾಪ್ಮನೋ ವಿನ್ಯದಧಾತ್ ತಸ್ಮಾನ್ನ ಜನಮಿಯಾತ್ ನಾಂತಮಿಯಾತ್ ನೇತ್ ಪಾಪ್ಮಾನಂ ಮೃತ್ಯುಮನ್ವವಾಯಾನೀತಿ (೩-೩-೧೦)

ಎಂಬುದಾಗಿ ಪಾಪದೇಶವಿರುವುದನ್ನು ಹೇಳಿದ್ದಾರೆ. ರುದ್ರ-ಇಂದ್ರಾದಿದೇವತೆಗಳು ದೇವತಾ ಪದವಿಯನ್ನು ಸಾಧಿಸಲು ಸಾಧನಗೈಯುವಾಗ, ಪಾಪರೂಪದಿಂದ ದೈತ್ಯರ ದಾಳಿಗೆ ತುತ್ತಾಗಿ ಸಾಧನೆ ನಡೆಸಲಾಗದ ಸಂದರ್ಭದಲ್ಲಿ ಮುಖ್ಯಪ್ರಾಣದೇವರ ಮೊರೆ ಹೋಗುತ್ತಾರೆ. ಆಗ ಪ್ರಾಣದೇವರು ಸಾಧನೆಗೆ ವಿಘ್ನವಾದ ಆ ಪಾಪಗಳನ್ನು ಮೋಚನಗೊಳಿಸಿ ದಿಗಂತಪ್ರದೇಶಗಳಲ್ಲಿ

ಹಾಗು ಅಲ್ಲಿಯ ಆ ಜನರಲ್ಲಿ ವಿಶೇಷವಾಗಿ ಪಾಪಗಳನ್ನು ಪ್ರಕ್ಷೇಪಮಾಡುತ್ತಾರೆ. ಆದ್ದರಿಂದ ಆ ಪಾಪವು ನನಗೆ ಉಂಟಾಗಬಾರದೆಂದು ಬಯಸುವ ಸಾಧಕನು ಆ ಜನರ ಬಳಿಗೆ ಹಾಗು ಆ ಪ್ರದೇಶಕ್ಕೆ ಹೋಗಕೂಡದು. ಇದು ಬೃಹದಾರಣ್ಯಕದ ವಿಚಾರ. ಇದರಿಂದ ದೇವತೆಗಳು ತಮ್ಮ ಪದವಿಗಾಗಿ ಸಾಧನೆಮಾಡುವ ಪ್ರದೇಶವನ್ನು ಬಿಟ್ಟು ಮಿಕ್ಕ ದೇಶಗಳು ಪಾಪದೇಶಗಳೆಂದು ಸ್ಪಷ್ಟವಾಗುತ್ತದೆ.

ದೇವತೆಗಳು ಸ್ವಪದಪ್ರಾಪ್ತಿಗಾಗಿ ಸಾಧನೆ ಮಾಡುವ ಪ್ರದೇಶ ಯಾವುದು ?

ಬೃಹದಾರಣ್ಯಕದಲ್ಲಿ ಇದೇ ಪ್ರದೇಶವೆಂದು ನಾಮನಿರ್ದೇಶಪೂರ್ವಕವಾಗಿ ಈ ಪ್ರಶ್ನೆಗೆ ಉತ್ತರ ದೊರೆಯದಿದ್ದರೂ ಭಾರತವರ್ಷದ ಭರತಖಂಡವು ಮಾತ್ರವೇ ಈ ಪ್ರದೇಶವೆಂದು ಅನೇಕ ಪುರಾಣಗಳ ಆಧಾರದಲ್ಲಿ ಗುರುತಿಸಬಹುದು.

ಬ್ರಹ್ಮತ್ವಂ ಅಮರೇಶತ್ವಂ ದೇವತ್ವಂ ಮರ್ತ್ಯತಾಂ ತಥಾ ।
ಪ್ರಯಾತಿ ಕರ್ಮಭೂಃ ಬ್ರಹ್ಮನ್ ನಾನ್ಯಾ ಲೋಕೇಷು ವಿದ್ಯತೇ ॥

ಮಾರ್ಕಂಡೇಯ ೫೫-೬೨

ಇಂದ್ರಾದ್ಯಾಶ್ಚ ಸುರಾಸ್ಸರ್ವೇ ತಸ್ಮಿನ್ ವರ್ಷೇ ದ್ವಿಜೋತ್ತಮಾಃ
ಕೃತ್ವಾ ಸುಶೋಭನಂ ಕರ್ಮ ದೇವತ್ವಂ ಪ್ರತಿಪೇದಿರೇ ॥ ಬ್ರಹ್ಮ ೨೫.೬

ಇದರಿಂದ ಭಾರತವು ಮಾತ್ರ ದೇವತಾ ಕರ್ಮಭೂಮಿ. ಇದರ ಹೊರದೇಶಕ್ಕೆ ವಾಯುದೇವರು ಪಾಪಪ್ರಕ್ಷೇಪ ಮಾಡಿದ್ದಾರೆಂದು ನಿಶ್ಚಯವಾಗುತ್ತದೆ.

ಯಾವುದು ಈ ಪಾಪಪ್ರಕ್ಷೇಪಗೊಂಡ ಪ್ರದೇಶ ?

ಇದಕ್ಕೆ ಶಾಸ್ತ್ರಗಳಲ್ಲಿ ವರ್ಣಿತವಾದ ಭೂಪ್ರದೇಶಗಳ ವಿಚಾರವನ್ನು ಗಮನಿಸಿದಾಗ ಉತ್ತರವು ಸುಲಭವಾಗಿದೆ. ಭೂಮಿಯಲ್ಲಿ 7 ದ್ವೀಪಗಳಿವೆ. ಅದರಲ್ಲಿ ಜಂಬೂದ್ವೀಪ ಬಿಟ್ಟು ಉಳಿದ 6ದ್ವೀಪಪ್ರದೇಶಗಳು ಸ್ವರ್ಗಸದೃಶ ಭೋಗಭೂಮಿಗಳಾಗಿವೆ. ಜಂಬೂದ್ವೀಪದಲ್ಲಿ 9ವರ್ಷಗಳು ಇರುತ್ತವೆ. ಇದರಲ್ಲಿ ಭಾರತವರ್ಷ ಬಿಟ್ಟು ಉಳಿದ 8ವರ್ಷಗಳು ಭೋಗ ಭೂಮಿಗಳಾಗಿವೆ. ಭಾರತವರ್ಷವು ಮಾತ್ರ ಭೋಗಭೂಮಿಯಲ್ಲ. ಈ ಭಾರತವರ್ಷದಲ್ಲಿ 9ವಿಭಾಗಗಳಿವೆ. ಅವೆಲ್ಲವೂ ಸಮುದ್ರದಿಂದ ಅಂತರ ಹೊಂದಿವೆ. ಪರಸ್ಪರ ಅಗಮ್ಯವಾಗಿವೆ. ಇದಕ್ಕೆ ಆಧಾರ -

ಭಾರತಸ್ಯಾಸ್ಯ ವರ್ಷಸ್ಯ ನವಭೇದಾಃ ಪ್ರಕೀರ್ತಿತಾಃ ।
ಸಮುದ್ರಾಂತರಿತಾ ಜ್ಞೇಯಾಃ ತೇ ತ್ವಗಮ್ಯಾಃ ಪರಸ್ಪರಮ್ ॥
ಇಂದ್ರದ್ವೀಪಃ ತಥಾ ಸೌಮ್ಯಃ ಗಂಧರ್ವಸ್ತ್ವಥ ವಾರುಣಃ ॥
ಅಯಂ ತು ನವಮಸ್ತೇಷಾಂ ದ್ವೀಪಃ ಸಾಗರಸಂವೃತಃ ।
ಆಯತೋ ಹ್ಯಾಕುಮಾರಿಕ್ಯಾತ್ ಆಗಂಗಾಪ್ರಭವಾಚ್ಚ ವೈ ॥
ಪೂರ್ವೇ ಕಿರಾತಾ ಯಸ್ಯಾಂತೇ ಪಶ್ಚಿಮೇ ಯವನಾಃ ಸ್ಮೃತಾಃ ।

ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಮಧ್ಯೇ ಶೂದ್ರಾಶ್ಚ ಭಾಗಶಃ ।
ಧರ್ಮಾರ್ಥಕಾಮಸಂಯುಕ್ತಾ ವರ್ಣಾನಾಂ ಚ ಸ್ವಕರ್ಮಸು ॥
ಇಹ ಸ್ವರ್ಗಾಪವರ್ಗಾರ್ಥಂ ಪ್ರವೃತ್ತಿರ್ಯೇಷು ಮಾನುಷೀ ॥ ವಾಯು ೪೫-೮೫

ಇದರಿಂದ ಒಂಬತ್ತನೇ ಭಾಗವೇ ಕನ್ಯಾಕುಮಾರಿಯಿಂದ ಗಂಗೋತ್ರಿಯವರೆಗೆ ಇರುವ ನಮ್ಮ ಭಾರತವೆಂದು ತಿಳಿಯುತ್ತದೆ. ಈ ಅಂಶವೆಲ್ಲವೂ "ಜಂಬೂದ್ವೀಪೇ ಭರತವರ್ಷೇ ಭರತಖಂಡೇ" ಎಂಬ ನಮ್ಮ ಸಂಕಲ್ಪಕ್ರಮದಲ್ಲಿ ಅಡಕವಾಗಿದೆ. ಈ ಭರತಖಂಡದಲ್ಲೇ ಚಾತುರ್ವರ್ಣ್ಯ-ಚತುರಾಶ್ರಮಗಳ ಧರ್ಮಕರ್ಮನಿಯತಿ, ಸ್ವರ್ಗ-ಅಪವರ್ಗಸಾಧನವಿರುತ್ತದೆ. ಈಗ, ಇದರ ಹೊರದೇಶಕ್ಕೆ ಪಾಪಪ್ರಕ್ಷೇಪವೆಂದರೆ, ಅದು ಸ್ವರ್ಗಸದೃಶವಾಗಿ ಆಧಿ-ವ್ಯಾಧಿ -ಜರಾವರ್ಜಿತವೆಂದು ವರ್ಣಿತವಾದ ಇತರ 6 ದ್ವೀಪಗಳು ಹಾಗು 8 ವರ್ಷಗಳಿಗೆ ಹೊಂದಲಾರದು. ಕಿಂತು ಭರತಖಂಡದ ಸುತ್ತ ಇರುವ ಇತರ 8 ಖಂಡಭಾಗಗಳಿಗೆ ಹಾಗು ಭರತವರ್ಷದ ಅಂತರದ್ವೀಪಪ್ರದೇಶಕ್ಕೆ ಮೀಸಲಾಗುತ್ತದೆ. ಇವುಗಳೇ ಆ ಬೃಹದಾರಣ್ಯಕೋಕ್ತ ಪಾಪದೇಶಗಳು. ಈ ಪ್ರದೇಶಗಳಲ್ಲಿ ಮ್ಲೇಚ್ಛ-ಪುಲಿಂದಾದಿಗಳಿರುವುದಾಗಿ ಲಿಂಗ ಪುರಾಣದಲ್ಲಿ ಉಲ್ಲೇಖವಿದೆ.

ಇಂದ್ರದ್ವೀಪಂ ಗತಾಃ ಕೇಚಿತ್ ತಥೈವ ಚ ಕಸೇರುಕೇ ।
ತಾಮ್ರದ್ವೀಪಂ ಗತಾಃ ಕೇಚಿತ್ ಕೇಚಿತ್ ದೇಶಂ ಗಭಸ್ತಿಮತ್ ॥
ನಾಗದ್ವೀಪಂ ತಥಾ ಸೌಮ್ಯಂ ಗಾಂಧರ್ವಂ ವರುಣಂ ಗತಾಃ ।
ಕೇಚಿನ್ ಮ್ಲೇಂಚ್ಛಾಃ ಪುಲಿಂದಾಶ್ಚ ನಾನಾಜಾತಿಸಮುದ್ಭವಾಃ ॥

ಇಂದಿಗೂ ಭರತಖಂಡದ ಹೊರದೇಶದಲ್ಲಿ ಈ ಮ್ಲೇಂಚ್ಛಪುಲಿಂದಾದಿಗಳೇ ನೆಲೆಸಿದ್ದಾರಷ್ಟೆ. ಇದರಂತೆ ಅಂತರದ್ವೀಪದ ವರ್ಣನೆಯಂತು ಆಫ್ರಿಕಾ ಮುಂತಾದ ಖಂಡದ ಚಿತ್ರಣವನ್ನೇ ನೀಡುತ್ತಿದೆ. ನೋಡಿ -

ದಕ್ಷಿಣೇನಾಪಿ ವರ್ಷಸ್ಯ ಭಾರತಸ್ಯ ನಿಬೋಧತ ।
ದಶಯೋಜನಸಾಹಸ್ರಂ ಸಮತೀತ್ಯ ಮಹಾರ್ಣವಮ್ ॥
ಯೇನ ಕೂಟತಟೈರ್ನೈಕೈಃ ತದ್ವೀಪಂ ಸಮಲಂಕೃತಮ್ ।
ತಸ್ಯ ಶೈಲಸ್ಯ ಛಿದ್ರೇಷು ವಿಸ್ತೀರ್ಣೇಷು ಆಯತೇಷು ಚ ॥
ನರನಾರೀಸಮಾಢ್ಯಾನಿ ಮುದಿತಾನಿ ಮಹಾಂತಿ ಚ ।
ತೇಷಾಂ ತಲಪ್ರವೇಶಾನಿ ಸಹಸ್ರಾಣಿ ಶತಾನಿ ಚ ॥
ದೀರ್ಘಶ್ಮಶ್ರುಧರಾತ್ಮಾನಃ ನೀಲಾ ಮೇಘಸಮಪ್ರಭಾಃ ।
ಜಾತಮಾತ್ರಾಃ ಪ್ರಜಾಸ್ತತ್ರ ಅಶೀತಿಪರಮಾಯುಷಃ ॥
ಶಾಖಾಮೃಗಸಧರ್ಮಾಣಃ ಫಲಮೂಲಾಶಿನಸ್ತಥಾ ।
ಗೋಧರ್ಮಾಣಃ ಅನಿರ್ದಿಷ್ಟಾಃ ಶೌಚಾಚಾರವಿವರ್ಜಿತಾಃ ॥
ತದ್ವೀಪಂ ತಾದೃಶೈಃ ಪೂರ್ಣಂ ಮನುಜೈಃ ಕ್ಷುದ್ರಮಾನುಷೈಃ ॥ ವಾಯು ೪೮-೧೦

ಇದರಿಂದ 80 ವರ್ಷ ಪರಮಾಯುಷ್ಯ ಪಡೆದ ಶೌಚಾಚಾರವಿಲ್ಲದವರಾದ, ಗೋಧರ್ಮ (ದನಗಳಂತೆ) ಶಾಖಾಮೃಗ(ಮಂಗ)ಗಳಂತೆ ಹೆಣ್ಣು-ಗಂಡು ಇವುಗಳ ನಿರ್ದಿಷ್ಟತೆ ಇಲ್ಲದ ಕ್ಷುದ್ರಮನುಷ್ಯರು ಕಪ್ಪುಬಣ್ಣದವರು ಅಲ್ಲಿ ತುಂಬಿರುವುದಾಗಿ ತಿಳಿಯುತ್ತದೆ. ಇದು ಆಫ್ರಿಕಾದಿಗಳ ಲಕ್ಷಣವೆಂದು ಪ್ರತ್ಯೇಕ ಹೇಳಬೇಕೆ ? ಆದ್ದರಿಂದ ಈ ಪ್ರದೇಶಗಳೇ ಬೃಹದಾರಣ್ಯಕದಲ್ಲಿ ಉಕ್ತವಾದ ಪಾಪದೇಶಗಳು.

**ಅಮೇರಿಕಾದಿ ದೇಶಗಳು ಭೋಗಭೂಮಿಗಳಲ್ಲ ಪಾಪಭೂಮಿ.**

ಭರತಖಂಡವನ್ನೇ ಭಾರತವರ್ಷವೆಂದು ತಪ್ಪಾಗಿ ಭಾವಿಸಿ, 'ಅತೋಽನ್ಯಾ ಭೋಗಭೂಮಯಃ' ಎಂಬ ಮಾತಿನಂತೆ ಭಾರತದಿಂದ ಹೊರತಾದ ಇತರ ದೇಶಗಳೆಲ್ಲ ಭೋಗಭೂಮಿಗಳೆಂದು ತಪ್ಪಾಗಿ ಭಾವಿಸುವ ಸಂಭವವಿದೆ. ಆದರೆ ಭೋಗಭೂಮಿಗಳು, ಆಧಿ-ವ್ಯಾಧಿ-ಜರಾವರ್ಜಿತವಾದ ಸುಖಮಾತ್ರವಿರುವ ಸ್ವರ್ಗಸದೃಶ ಪ್ರದೇಶಗಳು. ಈ ಲಕ್ಷಣ ಅಮೇರಿಕಾದಿಗಳಲ್ಲಿ ಇಲ್ಲವಾದ್ದರಿಂದ ಅವುಗಳು ಭೋಗಭೂಮಿಗಳಲ್ಲ. ಆದ್ದರಿಂದ ಅಲ್ಲಿ ಏನು ಮಾಡಿದರೂ ಪಾಪವಿಲ್ಲವೆಂದು (ಆ ದೇಶಗಳನ್ನು ಭೋಗಭೂಮಿಗಳೆಂದು) ಅಪಾರ್ಥ ಮಾಡಿಕೊಂಡು ಹೇಳುತ್ತ, ಈ ಭಾರತದಲ್ಲಿದ್ದು ಪಾಪಮಾಡುವುಕ್ಕಿಂತ, ಪಾಪವೇ ಇಲ್ಲದ ಅಮೇರಿಕಾದಿಗಳಿಗೆ ಏಕೆ ಹೋಗಕೂಡದೆಂದು ಕುಚೋದ್ಯ ಮಾಡಲು ಅವಕಾಶವೇ ಇಲ್ಲ. ಅಮೇರಿಕಾದಿಗಳು ಭೋಗಭೂಮಿ ಎನಿಸಿದ ಇತರ ವರ್ಷ - ಪ್ಲಕ್ಷಾದಿದ್ವೀಪಗಳ ಭಾಗಗಳಾಗಿವೆ ಎಂಬುದು ಸಾಧ್ಯವೇ ಇಲ್ಲ.

'ಭಾರತಸ್ಯ ತು ವರ್ಷಸ್ಯ ಭೇದಾ ಯೇ ನವ ಕೀರ್ತಿತಾಃ ।
ಇಹೋದಿತಸ್ಯ ದೃಶ್ಯಂತೇ ತಥಾನ್ಯೇಽತ್ರ ನೋದಿತೇ ॥

ಎಂದು ಭಾರತವರ್ಷದ 9 ಭಾಗಗಳು ದೃಶ್ಯವೆಂದು, ಇತರ ವರ್ಷಾದಿಗಳು ಅದೃಶ್ಯವೆಂದು ತಿಳಿಯುತ್ತದೆ. ಆದ್ದರಿಂದ ದೃಶ್ಯವಾಗಿರುವ ಭಾರತಾತಿರಿಕ್ತ ಭೂಪ್ರದೇಶಗಳೆಲ್ಲ ಇತರ ವರ್ಷ-ದ್ವೀಪಗಳಿಗೆ ಸೇರುವುದಿಲ್ಲ. ಕಿಂತು ಭಾರತವರ್ಷದ ಇತರ 8 ಖಂಡಗಳೆಂದು ಅಥವಾ ಅಂತರಿದ್ವೀ ಪ್ರದೇಶವೆಂಬುದಾಗಿ ತಿಳಿಯಬೇಕು. ಅಮೇರಿಕಾದಿಗಳೂ ಭಾರತವರ್ಷದ ಪ್ರದೇಶಗಳೇ ಆಗಿರುತ್ತವೆ. ಆದರೆ ಈ ಭರತವರ್ಷದಲ್ಲಿ ಭರತಖಂಡವು ''ಮುನಿಭಿಃ ಸೇವಿತತ್ವೇನ ಪುಣ್ಯದೇಶಃ ಪ್ರಕೀರ್ತಿತಃ'' ಎಂಬ ಮಾತಿನಂತೆ ಪುಣ್ಯಭೂಮಿಯಾಗಿ ಕರ್ಮಭೂಮಿ ಎನಿಸಿದ್ದರೆ, ಅಮೇರಿಕಾದಿಗಳು ವಾಯುದೇವರಿಂದ ಪಾಪಪ್ರಕ್ಷೇಪಕ್ಕೆ ಒಳಗಾದ ಪಾಪಭೂಮಿಗಳು ಎಂದು ಮನಗಾಣಬೇಕು. ಈ ಕರ್ಮಭೂಮಿಯಾದ ಭಾರತದಲ್ಲಿ ಮಾತ್ರ ವರ್ಣಾಶ್ರಮಧರ್ಮ-ಕರ್ಮಗಳು ವಿಹಿತವಾಗಿವೆ.

**ಅಮೇರಿಕಾದಿಗಳಲ್ಲಿ ವರ್ಣಾಶ್ರಮಧರ್ಮಕ್ಕೆ ಏಕೆ ಅವಕಾಶವಿಲ್ಲ ?**

ಯದ್ಯಪಿ ಭರತಖಂಡದಿಂದ ಹೊರತಾದ ಪ್ಲಕ್ಷದ್ವೀಪ ಇತ್ಯಾದಿ ಅಕರ್ಮಭೂಮಿಯಲ್ಲಿ ವರ್ಣಾಶ್ರಮಧರ್ಮಗಳ ಆಚರಣೆ ಕಂಡಂತೆ, ಅಮೇರಿಕಾದಿಗಳಲ್ಲಿಯೂ ಸಹ ಯಾಕೆ

ವರ್ಣಾಶ್ರಮಧರ್ಮಗಳನ್ನು ಆಚರಿಸಬಾರದೆಂದು ಪ್ರಶ್ನಿಸಬಹುದು. ಆದರೆ ಭೋಗಭೂಮಿಗಳೆನಿಸಿದ ಇತರ ವರ್ಷ-ದ್ವೀಪಾದಿಗಳಲ್ಲಿ ಚಾತುರ್ವರ್ಣ್ಯವ್ಯವಸ್ಥೆ ಇರುವುದರಿಂದ, ಆ ದೇಶದಲ್ಲಿ ಪಾಪ-ಪ್ರಕ್ಷೇಪವಿಲ್ಲವಾದ್ದರಿಂದ 'ತೇಷಾಂ ಸ್ವಭಾವತಃ ಸಿದ್ಧಿಃ' ಎಂಬ ಮಾತಿನಂತೆ ಆ ಪ್ರದೇಶಗಳಿಗೆ ಸ್ವಭಾವತಃ ಸಿದ್ಧಿಕರತ್ವ ಇರುವುದರಿಂದ ಅಲ್ಲಿ ವರ್ಣಾಶ್ರಮಧರ್ಮಾಚರಣೆ ಅಯುಕ್ತವಾಗದು. ಆದರೆ ಚಾತುರ್ವರ್ಣ್ಯವ್ಯವಸ್ಥೆ ಇಲ್ಲದ ಪಾಪದೇಶಗಳಾದ ಅಮೇರಿಕಾದಿಗಳಲ್ಲಿ ಇದಕ್ಕೆ ಅವಕಾಶವಿಲ್ಲ.

ಅಧರ್ಮದೇಶಮಧ್ಯೇ ತು ಕೃತ್ವಾ ಕ್ರತುಶತಾನ್ಯಪಿ ।
ನ ಪಶ್ಯಂತಿ ದ್ವಿಜಾಃ ಶ್ರೇಯಃ ಯಾತುಃ ಸ್ವರ್ಗೇ ಮಹಾರ್ಗಳಮ್ ॥ ಸ್ಮೃ.ಚಂ ೨೨

ಅಧರ್ಮದೇಶದಲ್ಲಿ ನೂರಾರು ಯಾಗ ಮಾಡಿದರೂ ದ್ವಿಜರು ಶ್ರೇಯಸ್ಸನ್ನು ಕಾಣಲಾರರು. ಅಲ್ಲಿಗೆ ಹೋದವನಿಗೆ ಸ್ವರ್ಗದ ಬಾಗಿಲು ಮುಚ್ಚಿದೆ. ಎಂದು ಸ್ಪಷ್ಟವಾಗಿ ಪಾಪದೇಶದಲ್ಲಿ ದ್ವಿಜಧರ್ಮಕ್ಕೆ ಫಲವಿಲ್ಲವೆಂಬುದನ್ನು ತಿಳಿಸಿದ್ದಾರೆ. ಇದಲ್ಲದೆ, ಬ್ರಾಹ್ಮಣ್ಯವಿದೆಯೆಂದು ಶೌಚಾಲಯಾದಿ ಅಪವಿತ್ರಸ್ಥಳದಲ್ಲಿ ವೇದಪಠನ ಮಾಡಿದರೆ ಪಾಪಸ್ಥಳದಲ್ಲಿ ಮಾಡಿದ ಪ್ರಯುಕ್ತ ಪಾಪವೇ ಬರುವಂತೆ, ಪಾಪದೇಶದಲ್ಲಿ ಮಾಡಿದ ವರ್ಣಾಶ್ರಮಧರ್ಮಾನುಷ್ಠಾನವು ಪಾಪಕ್ಕೆ ದಾರಿಯು. ಆದ್ದರಿಂದಲೇ ಶ್ರೀಮದಾಚಾರ್ಯರು ಕರ್ಮಣ್ಯ-ಅಕರ್ಮಣ್ಯ ದೇಶ ವಿಭಾಗವನ್ನು 11ನೇ ಸ್ಕಂಧ ಭಾಗವತತಾತ್ಪರ್ಯದಲ್ಲಿ ವಿವರಿಸಿದ್ದು ಗಮನಾರ್ಹವಾಗುತ್ತದೆ.

ಅಮೇರಿಕಾದಿಗಳಲ್ಲಿ ವರ್ಣಾಶ್ರಮಧರ್ಮಗಳಿಲ್ಲದಿದ್ದರೂ, ಮ್ಲೇಚ್ಛಾದಿಗಳಿಗೂ ಕೂಡ ಸತ್ಯವಚ - ಅಹಿಂಸೆ ಮಾತಾಪಿತೃಶುಶ್ರೂಷೆ - ಇತ್ಯಾದಿ ಧರ್ಮಗಳ ನಿರ್ಬಂಧವು ಇದ್ದೇ ಇರುತ್ತದೆ. ಇದಲ್ಲದೆ, ಭರತಖಂಡದಲ್ಲಿ ಸಾಧಕರಾಗಿರುವ ದ್ವಿಜರಿಗೆ ಇಲ್ಲಿ ಬಂದು ಸೇವಾ - ದಾನ - ಧರ್ಮಾದಿಗಳ ಮೂಲಕ ಸಾಧನೆಯನ್ನು ನಡೆಸಬೇಕೆಂದು

'ಮಾತಾಪಿತ್ರೋಶ್ಚ ಶುಶ್ರೂಷಾ ಕರ್ತವ್ಯಾ ಸರ್ವದಸ್ಯುಭಿಃ ।
ಆಚಾರ್ಯ ಗುರುಶುಶ್ರೂಷಾ ತಥೈವಾಶ್ರಮವಾಸಿನಾಮ್ ॥
ದಾನಾನಿ ಚ ಯಥಾಕಾಲೇ ದಾತವ್ಯಾನಿ ದ್ವಿಜಾತಿಷು । – ಪುರಾಣಸಾರ ಅ - ೩೦ -೪

ಇತ್ಯಾದಿ ಪ್ರಮಾಣಗಳು ತಿಳಿಸುತ್ತಿವೆ. ಆದ್ದರಿಂದ ವಿದೇಶಗಮನ ಮಾಡಿದವರು ನಿಷಿದ್ಧರೆಂದಾದಮೇಲೆ ಅವರು ನೀಡುವ ಧನಾದಿಗಳನ್ನು ಹೇಗೆ ಸ್ವೀಕಾರ ಮಾಡುತ್ತಾರೆಂಬ ಕುಚೋದ್ಯದ ಪ್ರಶ್ನೆಗೆ ಅರ್ಥವಿಲ್ಲ. ಸಾಧನಶರೀರವನ್ನು ಪಡೆದವರೆಲ್ಲರೂ ಈ ಕ್ರಮದ ಸಾಧನೆ ವಿಹಿತವಾದ್ದರಿಂದ ದಾನ – ಧರ್ಮಗಳ ಬಗ್ಗೆ ಲಘುವಾಗಿ ಮಾತಾಡುವುದು ಸಮಂಜಸವೆನಿಸುವುದಿಲ್ಲ.

ವಿಧಿ-ನಿಷೇಧಪ್ರಮಾಣಗಳು

ವರ್ಣಾಶ್ರಮಧರ್ಮಕ್ಕೆ ಅಧಿಕಾರಿಗಳಾದ ದ್ವಿಜರು ಎಲ್ಲಿ ಸಾಧನೆ ಮಾಡಬೇಕು ? ಹಾಗು ಎಲ್ಲಿಗೆ ಹೋಗಕೂಡದು. ಎಂಬುದಕ್ಕೆ ಸಾಕಷ್ಟು ಪ್ರಮಾಣಗಳಿವೆ.

ದೇಶಾನ್ ಪುಣ್ಯಾನ್ ಸಂಶ್ರಯೇತ ಮುನಿಭಿಃ ಸಾಧುಭಿಃ ಶ್ರಿತಾನ್ ।

–ಭಾಗ ೧೧-೨೯-೧೦

ತೀರ್ಥಾನಿ ಯಾನಿ ಪುಣ್ಯಾನಿ ಮುನಿಭಿಃ ಸೇವಿತಾನಿ ಚ ।
ವಸೇಯುಃ ತದುಪಾಂತೇಷು ಶಮಿಚ್ಛಂತೋ ದ್ವಿಜಾತಯಃ ॥ –ಪರಾಶರಸ್ಮೃತಿ
ಕೃಷ್ಣಸಾರೈಃ ಯವೈಃ ದರ್ಭೈಃ ಚಾತುರ್ವರ್ಣ್ಯಾಶ್ರಮೈಸ್ತಥಾ ।
ಸಮೃದ್ಧೋ ಧರ್ಮದೇಶಸ್ತಂ ಆಶ್ರಯೇರನ್ ವಿಪಶ್ಚಿತಃ ॥ –ಆದಿಪುರಾಣ
ಧರ್ಮದೇಶಃ ಸ ವಿಜ್ಞೇಯೋ ದ್ವಿಜಾನಾಂ ಧರ್ಮಸಾಧನಮ್ ॥ –ಸಂವರ್ತಸ್ಮೃತಿ

ಈ ಎಲ್ಲ ವಾಕ್ಯಗಳು ಋಷಿ-ಮುನಿಗಳು ವಾಸಮಾಡಿದ್ದ ಪುಣ್ಯದೇಶದಲ್ಲಿ ಕೃಷ್ಣಸಾರಮೃಗ ಸಂಚರಿಸುವ ಚಾತುರ್ವರ್ಣಾಶ್ರಮ ವ್ಯವಸ್ಥೆ ಇರುವ ದೇಶದಲ್ಲೇ ದ್ವಿಜರು ನೆಲಸಬೇಕು ಎಂದು ವಿಧಿಸುತ್ತಿವೆ. ಅಮೇರಿಕಾದಿಗಳು ಯಾವ ಋಷಿ-ಮುನಿಗಳ ಸ್ಥಾನ ? ಆದ್ದರಿಂದ ದ್ವಿಜರು ಅಲ್ಲಿಗೆ ಹೋಗಿ ಅನುಷ್ಠಾನಮಾಡುವುದು ವಿಧಿಯ ಉಲ್ಲಂಘನೆಯಾಗುತ್ತದೆ. ಇದಲ್ಲದೆ

ಪಾಪದೇಶಾಶ್ಚ ಯೇ ಕೇಚಿತ್ ಪಾಪೈರಧ್ಯುಷಿತಾ ಜನೈಃ ।
ಗತ್ವಾ ದೇಶಾನ್ ಅಪುಣ್ಯಾಂಸ್ತು ಕೃತ್ಸ್ನಂ ಪಾಪಂ ಸಮಶ್ನುತೇ ॥ –ಆದಿ ೮೪
ತಸ್ಮಾನ್ನ ಜನಮಿಯಾತ್ ನಾಂತಮಿಯಾತ್ । –ಬೃಹದಾರಣ್ಯಕ
ಮ್ಲೇಚ್ಛದೇಶಂ ನ ಚ ವ್ರಜೇತ್ । –ಶಂಖ ೧೪-೩೦
ನ ಮ್ಲೇಚ್ಛವಿಷಯಂ ಗಚ್ಛೇತ್ । –ವಿಷ್ಣು ೮-೨

ಇತ್ಯಾದಿ ಪ್ರಮಾಣಗಳು ಪಾಪದೇಶಗಳಾದ ಮ್ಲೇಚ್ಛದೇಶಕ್ಕೆ ಗಮನವನ್ನು ನಿಷೇಧಿಸುತ್ತಿವೆ. ಆದ್ದರಿಂದ ಅಮೇರಿಕಾದಿವಿದೇಶವಾಸವು ವಿಧಿಯನ್ನು ಮೀರಿ ನಿಷಿದ್ಧವನ್ನು ಮಾಡಿದ ಉಭಯಾತ್ಮ ಪಾಪಕೃತ್ಯವಾಗುತ್ತದೆ.

**ಪಾಪದ ಪರಿಣಾಮವೇನು ?**

ಎಷ್ಟೋ ಪಾಪಗಳನ್ನು ಮಾಡುವಾಗ ಇದೊಂದು ಪಾಪವಿದ್ದರೆ ಇರಲಿ ಏನು ತೊಂದರೆ ? ಹೀಗೆ ಬಾಲಿಶವಾಗಿ ಯೋಚಿಸುವ ಸಂಭವವಿದೆ. ಆದರೆ ಸ್ವರ್ಗ-ಮೋಕ್ಷ ಪ್ರತಿಬಂಧಕ ಪಾಪದ ಪ್ರಕ್ಷೇಪಕ್ಕೆ ಒಳಪಟ್ಟ ಪಾಪದೇಶದ ಸ್ಪರ್ಶಮಾತ್ರದಿಂದ ಸ್ವರ್ಗ ಮೋಕ್ಷಮಾರ್ಗ ಭ್ರಷ್ಟತೆಗೆ ಕಾರಣವಾಗುವ ಪಾಪಕ್ಕೆ ತುತ್ತಾಗುವ ಪರಿಣಾಮವನ್ನು ಗಮನಿಸಿದಾಗ ಅಮೇರಿಕಾದಿ ಪಾಪದೇಶಗಮನದಿಂದ ಬರುವ ಪಾಪವು ಮಿಕ್ಕ ಪಾಪಗಳಿಗಿಂತ ಮಹತ್ತರವೆಂದು ಸಿದ್ಧವಾಗುತ್ತದೆ. ಸಜ್ಜೀವರಾದ ಮ್ಲೇಚ್ಛ ಯವನಾದಿಗಳು ಭಾರತದಲ್ಲಿ ಜನ್ಮಪಡೆಯುವುದಕ್ಕಾಗಿ ಸಾಧನೆ ಮಾಡುವಂತೆ, ಇಲ್ಲಿ ಹುಟ್ಟಿಯೂ ಪಾಪದೇಶಕ್ಕೆ ಹೋಗುವ ದ್ವಿಜರಪಾಡು ಆಗುವುದು ಎಂಥ ಮಹತ್ತರ ಹಾನಿ ? ಎಂಬುದನ್ನು ಪ್ರತ್ಯೇಕ ಹೇಳಬೇಕಾಗಿದೆಯೇ ? ಪ್ರಕೃತಗ್ರಂಥದಲ್ಲಿ ಇಂಥಾ ಅನೇಕವಿಚಾರಗಳು ಇನ್ನೂ ವಿಶದವಾಗಿ ಚರ್ಚಿತವಾಗಿದ್ದನ್ನು ವಾಚಕರು ಗಮನಿಸುತ್ತಾರೆಂದು ತಿಳಿಯುತ್ತೇವೆ.

ಪ್ರಕೃತಕೃತಿಯ ವಿಶೇಷತೆ –

ಪ್ರಕೃತ ಗ್ರಂಥದಲ್ಲಿ 'ವಿಶೇಷಾತ್ ಭಾರತೇ ಪುಣ್ಯಂ' ಎಂಬ ವಾಕ್ಯಕ್ಕೆ ವಿವರಣೆ ನೀಡುವಾಗ ಭಾರತದಲ್ಲೇ ವಿಶೇಷವಾಗಿ ಪುಣ್ಯವೆಂಬ ಮಾತಿಗೆ ಹಿನ್ನೆಲೆಯೇನೆಂಬುದನ್ನು ವಿವರಿಸಿಸುವರೀತಿ ಬಹಳ ಸ್ವಾರಸ್ಯಕರವಾಗಿದೆ. ಭಾರತದಲ್ಲಿ ದೇಶಾಂಗಕ ಪುಣ್ಯಕರ್ಮ ಹಾಗು ಇತರ ಸಾರ್ವತ್ರಿಕ ಪುಣ್ಯಕರ್ಮಗಳೆರಡೂ ಇರುವುದರಿಂದ ಪುಣ್ಯಾಧಿಕ್ಯವೆಂಬ ವಿಚಾರವು ಪ್ರಾಚೀತ ಟಿಪ್ಪಣ್ಯಾದಿಗಳಲ್ಲಿ ಕಾಣದಿದ್ದರೂ ಅವಕ್ಕೆ ಅನುಗುಣವಾದ ರೀತಿಯಲ್ಲೇ ಆವಿಷ್ಕಾರಗೊಂಡಿರುವುದು ಗರ್ಮನಾರ್ಹವಾದ ಸಂಗತಿಯು.

ಕೃಷ್ಣಾಮೃತಾರ್ಣವದಲ್ಲಿ 'ಮ್ಲೇಚ್ಛದೇಶದಲ್ಲಿ ಅಥವಾ ಅಶುಚಿ ಇದ್ದಲ್ಲಿ ಸಾಲಿಗ್ರಾಮ ಇದ್ದರೆ ಮೂರು ಯೋಜನೆಗಳವರೆಗೆ ವಿಷ್ಣುಕ್ಷೇತ್ರ'ವೆಂಬುದಾಗಿ ಹೇಳಿರುವುದನ್ನೇ ಅಪಾರ್ಥಮಾಡುತ್ತ, ವಿದೇಶಗಮನವನ್ನು ಸಮರ್ಥಿಸಲು ಹವಣಿಸುವ ಕೆಲವರ ಮೊಂಡುವಾದಗಳನ್ನು ಈ ಕೃತಿಯಲ್ಲಿ ಬಹಳ ಖಂಡತುಂಡಾಗಿ ವಿಮರ್ಶಿಸಿರುವುದು ಅವಿಸ್ಮರಣೀಯ. ಸಾಲಿಗ್ರಾಮ ವಿದೆಯೆಂದು 3 ಯೋಜನದೊಲಗಿರುವ ಶೌಚಾಲಯಾದಿಗಳೂ ಸಹ ಪವಿತ್ರಸ್ಥಳವಾಗುತ್ತದೆ ? ಎಂದು ಪ್ರಶ್ನೆ ಮಾಡುತ್ತ , ಪ್ರಾಚೀನ - ಸಂಪ್ರದಾಯಾದಿಗಳಿಗೆ ಅನುಗುಣವಾಗಿ ವಾಕ್ಯದ ತಾತ್ಪರ್ಯವನ್ನು ಮನಗಾಣಬೇಕೆಂದು ನಿರ್ಧರಿಸುವ ರೀತಿ ಯಾರಿಗೆ ಖುಷಿ ನೀಡುವುದಿಲ್ಲ ? ಕರ್ಮಭೂಮಿಯಲ್ಲಿಯೇ ಮ್ಲೇಚ್ಛಾದಿಗಳು ಆವರಿಸಿದಾಗ ಸಾಧನೆಗೆ ಅವಕಾಶ ಹೇಗೆಂದು ಪ್ರಶ್ನೆಗೆ ಸಾಲಿಗ್ರಾಮದ ಮಹಿಮೆಯನ್ನು ವರ್ಣಿಸುತ್ತ ಶ್ರೀಮದಾಚಾರ್ಯರು ಈ ಮಾತನ್ನು ಆಡಿದ್ದಾರಷ್ಟೆ.ಇಲ್ಲವಾದರೆ,ಕರ್ಮಣ್ಯ-ಅಕರ್ಮಣ್ಯ ಭೂ-ವಿವೇಕವನ್ನುಭಾಗವತತಾತ್ಪರ್ಯದಲ್ಲಿ ಶ್ರೀಮದಾಚಾರ್ಯರು ನಿರೂಪಿಸುವ ವಿಧಾನವೇ ಅನುಚಿತವಾದೀತು ! 'ಅಸಂಸ್ಕೃತ - ಈರಣ' ಇತ್ಯಾದಿ ಅಕರ್ಮಣ್ಯ ದೇಶಗಳಲ್ಲಿ ಪುನಃ ಕರ್ಮಣ್ಯತ್ವಕ್ಕೆ ಅವಕಾಶವಿಲ್ಲದಂತೆ ಶ್ರೀಮದಾಚಾರ್ಯರ ವಾಕ್ಯಗಳಿವೆಯಷ್ಟೆ . ಆದ್ದರಿಂದ ನಮ್ಮ ಕರ್ಮಭೂಮಿಯಲ್ಲಿಯೇ ದುಷ್ಟಜನರು ಸೇರಿದ್ದಾಗ ಆ ದೇಶದಲ್ಲಿ ಸಾಲಿಗ್ರಾಮಾದಿಗಳ ಸನ್ನಿಧಿಯಲ್ಲಿ ಸಾಧನೆಗೈಯಬೇಕೆಂಬುದೇ ಇಲ್ಲಿಯ ವಿಚಾರವು. ಅಥವಾ ಕೃಷ್ಣಸಾರಮೃಗವಿದ್ದಲ್ಲಿ ಮಾತ್ರ ಕರ್ಮಾನುಷ್ಠಾನವೆಂದು ಭಾಗವತದಲ್ಲಿ ಹೇಳಿರುವುದರಿಂದ, ಕರ್ಮಭೂಮಿಯಲ್ಲಿಯೇ ಕೆಲವು ಪ್ರದೇಶಗಳಲ್ಲಿ ಕಾಲವೈಪರೀತ್ಯದಿಂದ ಕೃಷ್ಣಸಾರದ ಸಂತತಿ ನಶಿಸಿದಾಗ ಅಲ್ಲಿ ಸಾಲಿಗ್ರಾಮ ಸನ್ನಿಧಾನದಿಂದ ಕರ್ಮಾನುಷ್ಠಾನ ಕೈಗೊಳ್ಳಲು ಈ ಮಾತು ಸ್ವಾರಸಿಕವಾಗಿರುತ್ತದೆ. ಕೃಷ್ಣಸಾರಮೃಗವಿಲ್ಲದ ಸ್ಥಳವನ್ನೂ ಸಹ ಮ್ಲೇಚ್ಛದೇಶವೆಂದು ಹೇಳುವ ವ್ಯಾಖ್ಯಾನಗಳಿಗೆ ಇದು ಸಂಗತವೂ ಆಗಿರುತ್ತದೆ. ಆದರೆ, ಭಾಗವತತಾತ್ಪರ್ಯದಲ್ಲಿ 'ನದೀಸಮುದ್ರಗಿರಯಃ' ಎಂಬ ಮಾತಿನಿಂದ ನದ್ಯಾದಿಗಳಂತೆ ಸಾಲಿಗ್ರಾಮವಿದ್ದಲ್ಲಿಯೂ ಸಹ ಒಂದು ಯೋಜನಮಾತ್ರ ಕರ್ಮಣ್ಯತ್ವವೆಂದು ಭಾವನೆ ಬಂದಾಗ ಅದನ್ನು ಸ್ಪಷ್ಟಪಡಿಸಲು ಆಚಾರ್ಯರು ಈ ಕೃಷ್ಣಾಮೃತಾರ್ಣವದ ವಾಕ್ಯದಿಂದ ಮೂರುಯೋಜನ ಪಾವಿತ್ರ್ಯವೆಂಬ ವಿಶೇಷತೆಯನ್ನು ಸಾಲಿಗ್ರಾಮಕ್ಕೆ ತಿಳಿಸಿಕೊಡುತ್ತಿದ್ದಾರೆಂಬುದೇ ಇಲ್ಲಿ ಗಮನಿಸಬೇಕಾದ ಸಂಗತಿಯು. ಈ ಯಾವ ವಿಮರ್ಶೆಯನ್ನೂ ಲೆಕ್ಕಿಸದೆ ತಾವು ಮಾಡುವ ವಿದೇಶಗಮನವನ್ನು

ಕೃಷ್ಣಾಮೃತಮಹಾರ್ಣವದ ಈ ಮಾತಿನಿಂದ ಸಮರ್ಥಿಸಲು ಹವಣಿಸಿವುದು, 'ನಾನಾಜನಸ್ಯ ಶುಶ್ರೂಷಾ' ಎಂಬ ಮಾತಿನಿಂದ ಅಧರ್ಮವನ್ನು ಧರ್ಮವಾಗಿ ಸಾಧಿಸಲು ಹವಣಿಸುವಂತೆ ತಿರಸ್ಕಾರಾರ್ಹವಾಗುತ್ತದೆ.

ಹೀಗೆ ಈ ಗ್ರಂಥದಲ್ಲಿ, ಭಾರತದೇಶದ ಮಹತ್ವ, ಅದರಲ್ಲಿ ಪುನಃ ಗಮನಾನರ್ಹ-ವಾಸಾನರ್ಹ- ತದಪವಾದ ಇತ್ಯಾದಿ ವಿಶೇಷವಿಚಾರಗಳು, ಸಮುದ್ರಯಾನದ ಸಾರ್ವಕಾಲಿಕ ನಿಷೇಧ, ಹನುಮಂತನ ಸಮುದ್ರೋಲ್ಲಂಘನದ ಔಚಿತ್ಯ, ಪ್ರಾಯಶ್ಚಿತ್ತವಿಚಾರ ಇತ್ಯಾದಿಗಳು ಬಹಳ ಸ್ವಾರಸ್ಯಕರವಾಗಿ ಚರ್ಚಿಸಲ್ಪಟ್ಟು ವಿದ್ವಾಂಸರ ಮನಸೂರೆಗೊಳ್ಳುವಂತಿದೆ.

ಬಹುವಿಧದಿಂದ ಅನೇಕಪ್ರಮಾಣಗಳ ಸಂಗ್ರಹ - ವಿಮರ್ಶೆ ಇತ್ಯಾದಿ ಪರಿಶ್ರಮವಿದ್ದರೆ ಮಾತ್ರ ಇಂಥಾ ಗ್ರಂಥದ ಆವಿಷ್ಕಾರ ಸಾಧ್ಯವಾಗಿರುತ್ತದೆ. ಈ ಪರಿಶ್ರಮದ ಸಾರ್ಥಕತೆ ಪಡೆದ ಈ ಗ್ರಂಥಕಾರರಾದ ತಾಮ್ರಪರ್ಣೀ ಶ್ರೀನಿವಾಸಾಚಾರ್ಯರನ್ನು ಧನ್ಯ-ಮಾನ್ಯರೆಂಬ ಭಾವನೆಯಿಂದ ಸುಜನರೆಲ್ಲ ಅಭಿನಂದಿಸಬೇಕಾದ ಸಂಗತಿಯಿದು. 'ನಾನು ಹೇಳಿದ್ದನ್ನೇ ಇವರು ಈ ಗ್ರಂಥದಲ್ಲಿ ಬರೆದಿದ್ದಾರೆಂದು ಅಲ್ಲಲ್ಲಿ ಅನೇಕ ಪಂಡಿತಮ್ಮನ್ಯರು ಹೇಳಿಕೊಂಡರೆ ಹೇಳಿಕೊಳ್ಳಲಿ. ಇದರಿಂದ ಇವರಿಗೇನೂ ಹಾನಿಯಿಲ್ಲ. ಕರಾಳವಾದ ಈ ಕಲಿಗಾಲದಲ್ಲಿ ಧರ್ಮಶಾಸ್ತ್ರದ ವಿಚಾರಕ್ಕೆ ಆಸ್ಪದವೇ ಇಲ್ಲದಂಥ ವಾತಾವರಣದಲ್ಲಿ ಪ್ರಾಚೀನ - ಅರ್ವಾಚೀನ ಎಲ್ಲ ಧರ್ಮಶಾಸ್ತ್ರಗಳ ಸಾರದೊಡನೆ ಈ ಸುಂದರಪ್ರಬಂಧವನ್ನು ರಚಿಸಿದ್ದರಿಂದ ನಿಜವಾಗಿ ಸಂತಸಪಡುವ ವ್ಯಕ್ತಿಗಳೆಂದರೆ, ನಮ್ಮ ಪೂಜ್ಯ ಗುರುಗಳಾದ ಶ್ರೀಜಾಲಿಹಾಳಾಚಾರ್ಯರೆಂಬುದರಲ್ಲಿ ಏನೂ ಸಂದೇಹ-ವಿಲ್ಲ. ಧರ್ಮದಲ್ಲಿ ಭೀಮನಿಷ್ಠೆ ತೊಟ್ಟು ಶುದ್ಧ ಭಾಗವತ ಧರ್ಮಕ್ಕೆ ಬದ್ಧವಾಗಿ ಬಾಳಿದ ಈ ಗುರುವರ್ಯರ ಶಿಷ್ಯತ್ವವನ್ನು ಶ್ರೀ ತಾಮ್ರಪರ್ಣೀ ಶ್ರೀನಿವಾಚಾರ್ಯರು ಸಾರ್ಥಕ-ಗೊಳಿಸುವಂತೆ ಪ್ರಕೃತಕೃತಿರಚನೆ-ಆಚರಣೆ ತೋರಿದ್ದಾರೆಂಬುದನ್ನು ಅಧಿಕವಾಗಿ ಹೇಳಬೇಕಾಗಿದೆಯೆ ?

ಈ ಕೃತಿಯ ಕಡೆಯಲ್ಲಿ ಸ್ವಧರ್ಮವನ್ನು ಬಿಟ್ಟು ವಿದೇಶಗಮನ ಮಾಡುತ್ತಿರುವ ಕೆಲವು ಪೀಠಾಧಿಪತಿಗಳ ಪ್ರಸ್ತಾಪವನ್ನು ಮಾಡಿ 'ಇಂಥವರ ವಿಶಿಷ್ಟಕೃಷ್ಣಪೂಜಾದಿ-ಗಳಿಗೆ ಅಧಿಕಾರಿಗಳಾರರೆ'ಂದು ಹೇಳಿದ್ದು 'ನಾನಾಜನಸ್ಯ ಶುಶ್ರೂಷಾ', 'ನಕರ್ಮಣಾ ನ ಪ್ರಜಯಾ' ಇತ್ಯಾದಿ ಶ್ರುತಿಸ್ಮೃತಿ ಅನುಗುಣ ಸಂಪ್ರದಾಯಗಳನ್ನು ಅಪಾರ್ಥ ಅಪಲಾಪ ಮಾಡುವ ಇತರ ಯತಿಗಳಿಗೂ ಅನ್ವಯಿಸುತ್ತದೆಯೆಂಬುದು ಶಿಷ್ಟಜನರ ಭಾವನೆಯೇ ಆಗಿರುತ್ತದೆ. ಪರಮಪೂಜ್ಯ ಶ್ರೀ ಜಾಲಿಹಾಳಾಚಾರ್ಯರ ಪಾದಪದ್ಮದ ಸ್ಮೃತಿಯು, ಅಧರ್ಮವನ್ನೇ ಧರ್ಮವೆಂದು ಸಮರ್ಥಿಸಲು ಹವಣಿಸುವ ಇಂಥಾ ಅನೇಕ ದುರ್ವಾದಗಳನ್ನು ಪರಿಹರಿಸುವಂತೆ ಈ ಲೇಖಕರಿಗಷ್ಟೇ ಅಲ್ಲದೆ ಇತರರಿಗೂ ಸಹ ಅನುಗ್ರಾಹಕವಾಗಿರಲೆಂದು ಭಗವಂತನನ್ನು ಬೇಡುತ್ತೇವೆ. ನಿಜವಾಗಿಯೂ ಇದೊಂದು ಮಹತ್ ಸಾಧನೆ. ಇಂದಿಗೆ 10ವರ್ಷಕ್ಕೆ ಮೊದಲು ಈ ವಿಚಾರವೆಲ್ಲ ಸಾಕಷ್ಟು ಚರ್ಚೆಗೊಳಗಾಗಿದ್ದು ಈಗ ಕೃತಿರೂಪದಿಂದ ಎಲ್ಲ ವಿಮರ್ಶಕರ ಕೈಸೇರುವಂತಾಗಿದೆ. ಇದರಿಂದ ಸಾತ್ವಿಕರು ಸನ್ಮಾರ್ಗಗಾಮಿಗಳಾಗಲಿ ಹಾಗೂ ವಿಮರ್ಶಕ ವಿದ್ವಾಂಸರೆಲ್ಲರೂ ಕಣ್ಣರಳಿಸಿ ಹರ್ಷಿಸುವಂತಾಗಲೆಂಬುದೇ ನಮ್ಮ ಹಿರಿದಾಸೆ.

ತಾತ್ಕಾಲಿಕವಾಗಿ ದೈಹಿಕಅಸ್ವಸ್ಥತೆಯಿಂದ ಉಂಟಾದ ಅನೇಕ ಪರಿಣಾಮಗಳಾವುದನ್ನೂ ಎಣಿಸದೆ, ತನ್ನ ಅದಮ್ಯಉತ್ಸಾಹದ ಪ್ರತಿರೂಪವಾಗಿ ಈ ಕೃತಿರಚನೆ - ವಿಮರ್ಶೆ - ಪಾಠ - ಪ್ರವಚನ ಇತ್ಯಾದಿ ಸತ್ಕರ್ಮಗಳಿಂದ ನಿರಂತರವಾಗಿ ಗುರುಸೇವೆಯಲ್ಲಿ ನಿರತರಾದ ಚಿರಾಯುಷ್ಯ ಸಂಪನ್ನರಾದ ಶ್ರೀತಾಮ್ರಪರ್ಣೀ ಶ್ರೀನಿವಾಸಾಚಾರ್ಯರಿಗೆ ಹರಿ - ವಾಯು - ಗುರುಗಳ ಅನುಗ್ರಹವು ಪ್ರಾಪ್ತವಾಗಿದ್ದರೂ, ಇನ್ನೂ ಅಧಿಕವಾಗಿ ಪೂರ್ಣಾಯುಷ್ಯ - ಪೂರ್ಣಾರೋಗ್ಯ ಭಾಗ್ಯಾದಿಗಳನ್ನು, ನಮ್ಮ ಗುರುಗಳಾದ ಶ್ರೀಜಾಲಿಹಾಳಾಚಾರ್ಯರ ಅಂತರ್ಗತರಾದ ಶ್ರೀಸತ್ಯಧ್ಯಾನತೀರ್ಥರೇ ಮೊದಲಾದ ಗುರುಪರಂಪರೆಯಿಂದ ಸೇವಿತಪಾದಾರವಿಂದರಾದ ಶ್ರೀಮತ್ ಆನಂದತೀರ್ಥವರದ ಅಸ್ಮತ್‌ಕುಲದೇವತಾ ಶ್ರೀಲಕ್ಷ್ಮೀವೆಂಕಟೇಶದೇವರು ದಯಪಾಲಿಸಲೆಂದು ಕರ್ತವ್ಯರೂಪವಾಗಿ ಆಶೀರ್ವಚನಗಳನ್ನಾಡುತ್ತ ವಿರಮಿಸುತ್ತೇವೆ.

(ಪ್ರಕೃತ ಸಾಮಾಜಿಕ ವಿಚಾರ)

ಈ ಘೋರ-ಕಲಿಗಾಲದಲ್ಲಿ ಈಗಾಗಲೇ ಸಾವಿರಾರು ದ್ವಿಜರು ವಿದೇಶಗಮನಮಾಡಿರುವ ಸಂದರ್ಭವಿದ್ದರೂ, ಕಳೆದುಹೋದ ಸಂಗತಿಯನ್ನು ಚಿಂತಿಸದೆ, ಹರಿ-ವಾಯು-ಗುರುಗಳಲ್ಲಿ ಭಕ್ತಿಶ್ರದ್ಧೆಗಳಿಂದ ಪಶ್ಚಾತ್ತಾಪಾದಿಗಳಿಂದ ಸಾಧನೆಯತ್ತ ದೃಷ್ಟಿಯಿಟ್ಟು ನಿರಾಶರಾಗದೆ ಸಾಧನಶರೀರವನ್ನು ಸಾರ್ಥಕಗೊಳಿಸಿಕೊಳ್ಳುವುದೇ ಜಾಣತನವು. ಮನೆಯಲ್ಲಿ ಇತರ ಎಲ್ಲ ಸ್ಥಳಗಳು ಅನೇಕ ಅನಿವಾರ್ಯತೆಗಳಿಂದ ಅಶುಚಿಯಾಗಿದ್ದರೂ ಕಡೇಪಕ್ಷ ಪುಟ್ಟದಾದರೂ ದೇವರ ಮನೆಯಾದರೂ ಪವಿತ್ರವಾಗಿ ಇರಬೇಕಾದಂತೆ, ಸಮಾಜದಲ್ಲಿ ಹೆಂಡತಿ- ಮಕ್ಕಳಂದಿಗರಾದ ಸಾಮಾನ್ಯಜನರು, ಹೊಟ್ಟೆಪಾಡಿಗಾಗಿ, ಕೆಲಸದ ಒತ್ತಡದಿಂದ, ಆಸೆ ಆಮಿಷಗಳ ದೌರ್ಬಲ್ಯದಿಂದ ಅಥವಾ ಸರಿಯಾದ ತಿಳುವಳಿಕೆ ಸಿಗದೆ ಪಾಪದೇಶಗಮನದ ಅನಿವಾರ್ಯತೆ ಉಂಟಾಗಿದ್ದರೂ, ಸಮಾಜಕ್ಕೆ ದೇವರ ಮನೆಯಂತೆ ಪವಿತ್ರಸ್ಥಾನರಾಗಿರುವ ವಿರಕ್ತ ಯತಿಗಳು ಪೀಠಾಧಿಪತಿಗಳು ಪಾವಿತ್ರ್ಯತೆಯನ್ನು ಕಾಪಾಡಿಕೊಂಡಿದ್ದರೆ ಮಾತ್ರ ಸಮಾಜವು ಆರೋಗ್ಯಕರವಾಗಿರುತ್ತದೆ. ದೇವರ ಮನೆಯೇ ಅಪವಿತ್ರವಾದರೆ ಮನೆಯ ವಾತಾವರಣ ಏನಾದೀತು ? ಮನೆಯನ್ನೆಲ್ಲ ದೇವರ ಮನೆಯಾಗಿಸಲು ಇದು ಕೃತಯುಗವಲ್ಲವಾದರೂ ದೇವರ ಮನೆಯನ್ನಾದರೂ ಪವಿತ್ರವಾಗಿ ಉಳಿಸಿಕೊಳ್ಳಬೇಕಾದದು ಸಮಾಜದ ಕರ್ತವ್ಯವಾಗಿದೆ.

ಬಾಳಗಾರು ಶ್ರೀನಿವಾಸಾಚಾರ್ಯ

# ನಿವೇದನೆ

**ಆಪಾದಮೌಳಿ ಪರ್ಯಂತಂ ಗುರೂಣಾಮಾಕೃತಿಂ ಸ್ಮರೇತ್ ।**
**ತೇನವಿಘ್ನಾಃ ಪ್ರಣಶ್ಯಂತಿ ಸಿದ್ಧ್ಯಂತಿ ಚ ಮನೋರಥಾಃ ॥**

ನಮ್ಮ ಭಾರತವು ಪುಣ್ಯದೇಶ, ಪವಿತ್ರದೇಶ ಮುಂತಾದ ಕ್ರಮದಿಂದ ಋಷಿಮುನಿಗಳು ಸ್ತುತಿಸುತ್ತಾರೆ. ಭಾಗವತಾದಿ ಗ್ರಂಥಗಳಲ್ಲಿ ದೇವತೆಗಳಿಂದ ಸ್ತುತಿಸಲ್ಪಟ್ಟ ಧನ್ಯಭೂಮಿ ಕರ್ಮ ಭೂಮಿಯು ನಮ್ಮ ಭಾರತ ವಿದೇಶಗಳು ಪಾಪ ಭೂಮಿ, ಅಕರ್ಮಭೂಮಿ, ನಿಷಿದ್ಧದೇಶ ಎಂದೂ ಸ್ಮೃತಿಪುರಾಣಗಳಲ್ಲಿ ನಿಂದೆ ಇದೆ. ಇಂದಿನ ವಾತಾವರಣದಲ್ಲಿ ವಿದೇಶಗಳು ವೈಜ್ಞಾನಿಕವಾಗಿ, ಆರ್ಥಿಕವಾಗಿ ನಮ್ಮ ಭಾರತಕ್ಕಿಂತಲೂ ಮುಂದುವರಿದಿದ್ದರೂ ನೈತಿಕವಾಗಿ, ಸುಸಂಸ್ಕೃತಿಯ ದೃಷ್ಟಿಯಿಂದ ಬಹು ಹಿಂದೆ ಇದೆ. ಶಾಸ್ತ್ರನಿಷಿದ್ಧಾಚರಣೆಗಳಿಂದ ಪಾಪ-ಭೂಯಿಷ್ಠವಾಗಿವೆ. ಈ ಕಾರಣದಿಂದ ವಿದೇಶಗಳನ್ನು ಪಾಪದೇಶವೆಂದು ಕರೆಯುತ್ತಾರೆ. ಇದನ್ನು ಹೇಳಿದರೆ ವಿದೇಶಿಯರಿಗೆ ಕೋಪಬರುವುದು ಸಹಜವೇ. ಶಾಸ್ತ್ರಗಳ ಹಾಗು ಧರ್ಮಗಳ ವಿಷಯದಲ್ಲಿ ಗೌರವ ಮರ್ಯಾದೆಯನ್ನು ಕಳೆದುಕೊಂಡು, ವಿದೇಶಿಯರ ಪ್ರಭಾವಕ್ಕೊಳಗಾದ ಭಾರತೀಯರೂ ಕುಪಿತರಾಗುತ್ತಾರೆ. ಅಸಭ್ಯರೀತಿಯಲ್ಲಿ ದುರಾಚಾರಗಳನ್ನು ನಡೆಸುತ್ತಾರೆ. ಹಿಂದಿನ ಕಾಲದ ಹಿರಿಯರು ಶಿಷ್ಟಾಚಾರವನ್ನು ಅನುಸರಿಸುತ್ತ ಪಾಠ ಪ್ರವಚನರತರಾಗಿರುತ್ತಿದ್ದರು. ಈಗ ಪಾಠ ಪ್ರವಚನಗಳನ್ನು ಬಿಟ್ಟು ಹಿರಿಯ ಅನುಷ್ಠಾನಗಳನ್ನು ಉಲ್ಲಂಘಿಸುತ್ತ , ಅವಹೇಳನೆ ಮಾಡುತ್ತ ಸಜ್ಜನರನ್ನು ಹೀಯಾಳಿಸುತ್ತಾರೆ. ಸ್ವೇಚ್ಛಾಚಾರಿಗಳಾಗುತ್ತಾರೆ. 'ಇದು ಸರಿಯಲ್ಲ' ಎಂದರೆ 'ನೀವು ಯಾವ ಕಾಲದಲ್ಲಿದ್ದೀರಿ ?' ಎಂದು ಪ್ರಶ್ನಿಸುತ್ತಾರೆ . ಇದು ಅಧರ್ಮ ಎಂದರೆ ಎಲ್ಲಿದೆ ಪ್ರಮಾಣ ? ಎಂದು ಕೇಳುತ್ತಾರೆ. ಪಂಡಿತರು ಅಲ್ಲಲ್ಲಿರುವ ಪ್ರಮಾಣಗಳನ್ನು ಶ್ರಮಪಟ್ಟು ಹುಡುಕಿ ಸಂಗ್ರಹಿಸಿಕೊಟ್ಟರೆ ನಕ್ಕು ಕಣ್ಣೆತ್ತಿಯೂ ನೋಡದೆ, 'ಇವು ಈಗ ಅಪ್ರಸ್ತುತ ' ಎನ್ನುತ್ತಾರೆ.

ಹೆಚ್ಚಾಗಿ ಮಾತಾಡಿದರೆ, 'ಅವರದು ಸರಿಯೋ ? ಇಂತವರ ಕಾರ್ಯವನ್ನು ನೀವು ಏಕೆ ಪ್ರಶ್ನಿಸಲಿಲ್ಲ ?' ಎಂದು ಬಾಯಿಮುಚ್ಚಿಸಲಿಕ್ಕೆ ಮಾತಾಡುತ್ತಾರೆ. 'ವಿದೇಶಕ್ಕೆ ಹೋಗುವುದು ದೊಡ್ಡತಪ್ಪು' ಎಂದರೆ 'ಹಾಗೇನಿಲ್ಲ' ಎಂದು ಅಪಲಾಪಿಸುತ್ತಾರೆ.

ಹೀಗೆ ಮಾತುಮಾತಿಗೂ ಶಾಸ್ತ್ರಗಳನ್ನು ಶಾಸ್ತ್ರೀಯ ಸಂಪ್ರದಾಯಗಳನ್ನು ಶಿಷ್ಟಾಚಾರಗಳನ್ನು ಮೂದಲಿಸುವ ಪ್ರವೃತ್ತಿ ಆಸ್ತಿಕ ಧಾರ್ಢ್ಯವನ್ನು ಕಲಕಿಬಿಡುತ್ತದೆ. ಆದರೂ 'ಭುವಿ ಸಂತಿ ಸೌಮ್ಯಪುರುಷಾಃ ಗುಣೋಚಿತಾಃ' ಎಂಬ ನ್ಯಾಯದಿಂದ ಅಲ್ಲಲ್ಲಿ ಇರುವ ಸಾತ್ವಿಕರ ಹೃದಯದ ತುಮುಲವನ್ನು ಪರಿಹರಿಸಿ ಧರ್ಮದ ವಸ್ತುಸ್ಥಿತಿಯನ್ನು ಪ್ರಕಟಪಡಿಸುವ ಅನಿವಾರ್ಯತೆ ಒದಗಿದ್ದರಿಂದ ಈ ಕಿರುಕೃತಿ 'ಸತ್ಕರ್ಮಕ್ಷೇತ್ರನಿರ್ಣಯ' ಜನ್ಮತಾಳಿದೆ. ಯದ್ಯಪಿ ಈ ವೈಜ್ಞಾನಿಕಯುಗದಲ್ಲಿ ಧರ್ಮಶಾಸ್ತ್ರದ ಸದುಪಯೋಗ ಬಹಳ ಅಲ್ಪ. ಮಹತ್‌ಸ್ಥಾನದಲ್ಲಿ ಆರೂಢರಾಗಿ ಧರ್ಮಪ್ರತಿಷ್ಠಾನದ ಪೀಠಕ್ಕೆ ಅಧಿಪತಿಗಳಾಗಿ ಇದ್ದವರೂ ಸನ್ಯಾಸಿಗಳಾಗಿ

ಗೃಹಸ್ಥವರ್ಗದಿಂದ ಪೂಜ್ಯರೆನಿಸಿ ಮಾಡಬೇಕಾದ ಮಾರ್ಗದರ್ಶನ ಮಾಡಬೇಕಾದ ಕೆಲವರು (ಉಡುಪಿಯ ಅಷ್ಟಮಠಗಳಲ್ಲಿ ಒಂದಾದ ಪುತ್ತಿಗೆಮಠದ ಅಧಿಪತಿಗಳಾದ ಸುಗುಣೇಂದ್ರ-ತೀರ್ಥರು) ಸ್ವಪ್ರೇರಣೆಯಿಂದಲೋ ಪರಪ್ರೇರಣೆಯಿಂದಲೋ ಗೋಮಾಂಸ ಭಕ್ಷಣ, ವ್ಯಭಿಚಾರ ಮುಂತಾದ ಘೋರ ಪಾಪಗಳನ್ನೇ ನಿಯತವಾಗಿಸಿರುವ ಯಾವ ಸುಸಂಸ್ಕೃತಿಯನ್ನೂ ಹೊಂದದ ಮ್ಲೇಚ್ಛದೇಶಗಳಿಗೆ ಹೋಗಿ ಅಲ್ಲಿ ಬಹುಕಾಲ ವಾಸಮಾಡಿ ತಿರುಗಿ ಬಂದು, ಶ್ರೀಕೃಷ್ಣ ಪರ್ಯಾಯಪೂಜೆ ಸರ್ವಜ್ಞ ಪೀಠಾರೋಹಣ ಮುಂತಾದ ಧಾರ್ಮಿಕ ವಿಶಿಷ್ಟಕಾರ್ಯಗಳನ್ನು ಮಾಡಲು ಹೊರಟಿರುತ್ತಾರೆ. ಇದರಿಂದ ವಿದೇಶಗಮನವು ನಿಷಿದ್ಧವೇ ಅಲ್ಲ ಎಂಬ ಕಲ್ಪನೆ ಜನರಲ್ಲಿ ಮೂಡಿದಾಗ ಇದು ಅಧರ್ಮವೆಂದು ತಿಳಿದು ಅನಿವಾರ್ಯತೆಯಿಂದ ವಿದೇಶಗಳಿಗೆ ಹೋಗುತ್ತಿದ್ದ ಜನರು ನಿರಂಕುಶರಾಗಿಬಿಡುತ್ತಾರೆ. ಅನ್ಯರನ್ನೂ ಈ ಪಾಪಕಾರ್ಯಕ್ಕೆ ಪ್ರಚೋದಿಸುತ್ತಾರೆ. ಈ ಘೋರ ಅನರ್ಥವನ್ನು ಸ್ವಲ್ಪ ಮಟ್ಟಿಗಾದರೂ ತಪ್ಪಿಸಲು ಈ ಪ್ರಯತ್ನ-ವಷ್ಟೇ .

ಈ ಒಂದು ಪ್ರಯತ್ನದ ಸಾರ್ಥಕತೆಯು ಅನೇಕ ವಿದ್ವಜ್ಜನರ ಅಭಿಮಾನಪೂರ್ವಕ ಲೇಖನೆಯಿಂದ ಸ್ಪಷ್ಟ. ಇದಕ್ಕಾಗಿ ಆಭಾರಿಯಾಗಿದ್ದೇವೆ. ಗ್ರಂಥ ಪ್ರತಿಪಾದ್ಯನಾದ ಧರ್ಮಮೂರ್ತಿ ಭಗವಾನ್ ಶ್ರೀಕೃಷ್ಣನ ಪರಮಾನುಗ್ರಹದಿಂದ ಸಾತ್ವಿಕಜನರ ಧರ್ಮ ಕಾಪಾಡುವ ಶಕ್ತಿಯು ಅಭಿವರ್ಧಿಸಲಿ ಎಂದು.

ನಮ್ಮಿಂದ ಉಪಾಸ್ಯರಾದ ಧರ್ಮದ ಕನ್ನಡಿಯಂತಿರುವ ಪರಮಪೂಜ್ಯ ಪಂಡಿತರಾಜ ಜಾಲಿಹಾಳ ಶ್ರೀನಿವಾಸಾಚಾರ್ಯರ ಹಾಗೂ ಪ್ರಾತಃ ಸ್ಮರಣೀಯ ಶ್ರೀಸತ್ಯಧ್ಯಾನ ಶ್ರೀಚರಣರ ಅಂತರ್ಯಾಮಿಯಾದ ಶ್ರೀಮದಾನಂದತೀರ್ಥ ಭಗವತ್ಪಾದಾಚಾರ್ಯರ ಹೃದಯದಲ್ಲಿ ನೆಲೆಸಿರುವ ಭಾರತೀರಮಣಮುಖ್ಯ ಪ್ರಾಣಾಂತರ್ಗತನಾದ ಅನಂತರೂಪಧರನಾದ ಶ್ರೀಲಕ್ಷ್ಮೀ-ಹಯಗ್ರೀವದೇವರನ್ನು ಪ್ರಾರ್ಥಿಸುತ್ತೇವೆ.

ತಾಮ್ರಪರ್ಣೀ ಶ್ರೀನಿವಾಸಾಚಾರ್ಯ

# ಪ್ರಕಾಶಕರ ನುಡಿ

ಕಲಿಯುಗದ ಪ್ರಭಾವ ಎಷ್ಟು ಘೋರ ಎಂಬುದು ಕಾಣಲಾರಂಭಿಸಿದೆ. 'ಬ್ರಾಹ್ಮಣೋ ನಿತರಾಂ ಗುರುಃ' ಎನ್ನುವಂತೆ ಪ್ರತಿಯೊಬ್ಬ ಬ್ರಾಹ್ಮಣರು ಜಗತ್ತಿನ ಎಲ್ಲ ಜನರ ಗುರುಗಳು. ಅವರಿಗೆ ಸನ್ಯಾಸಿಗಳು, ಸನ್ಯಾಸಿಗಳಿಗೆ ಪರಮಹಂಸರು, ಪರಮಹಂಸರಿಗೆ ಪೀಠಾಧಿಪತಿಗಳು ಗುರುಗಳು. ಗುರುಗಳೆಂದರೆ ಗೌರವ ಉಳಿಸಿಕೊಳ್ಳುವವರು. ಗೌರವ ಬರುವುದು ವಿಧ್ಯುಕ್ತಕರ್ಮ ಮಾಡಿದಾಗ ಮತ್ತು ನಿಷಿದ್ಧ ಕರ್ಮ ಮಾಡದಿದ್ದಾಗ. ಇದು ಇಲ್ಲದಿದ್ದಾಗ ಬರಬೇಕಾದ ಗೌರವಕ್ಕೆ ಹಾನಿಯುಂಟಾಗುತ್ತದೆ. ಒಬ್ಬ ಮೇಲ್ಪಟ್ಟ ಸ್ಥಾನದಲ್ಲಿರುವವನಿಗೆ ಸಾಮಾನ್ಯ ನೀತಿಯೇ ಇಲ್ಲದಿದ್ದಾಗ ಅವನನ್ನು ಗೌರವಿಸುವುದು ಹೇಗೆ ? ಅತ್ಯುನ್ನತ ಸ್ಥಳದಲ್ಲಿ ಮಂಗನನ್ನು ಕೂರಿಸಿದರೂ ಗೌರವ ಸಿಗಬಾರದು. ಶ್ರೀಮದಾನಂದತೀರ್ಥ-ಭಗವತ್ಪಾದಾಚಾರ್ಯರ ಪರಂಪರೆ ಎಂಬುದು ಅತ್ಯಂತ, ಅತ್ಯಂತ ಉತ್ತಮ ಸ್ಥಾನ. ಅಲ್ಲಿ ಬ್ರಾಹ್ಮಣರೇ ಅಲ್ಲದವರು ಕೂರಬಾರದು. ಕೃಷ್ಣಾರ್ಚನೆ ಎಂಬುದು ಎಲ್ಲದಕ್ಕಿಂತ ಪವಿತ್ರ ಕಾರ್ಯ. ಆ ರೀತಿಯಾದ ಪವಿತ್ರ ಪೂಜೆಯನ್ನು ಇಂದು ವಿದೇಶಯಾನವಾಸ ಮಾಡಿದ ಸುಗುಣೇಂದ್ರರು ಮಾಡಲು ಹೋರಟಿದ್ದಾರೆ. ಇದು ಸನಾತನ ಧರ್ಮದ ಜನಗಳಿಗೆ ಹೃದಯ ಚುಚ್ಚುವಂತದ್ದು. ಇದು ಸರಿಯಾದದ್ದೇ ಎಂದು ಸಮರ್ಥಿಸಿಕೊಳ್ಳುವುದು ಇನ್ನೊಂದು ವಿಪರ್ಯಾಸ. ಶಾಸ್ತ್ರವನ್ನು ಸರಿಯಾಗಿ ನೋಡುವವರಿಗೆ ವಿದೇಶಗಮನವು ನಿಷಿದ್ಧವೆಂದು ಮನವರಿಕೆಯಾಗಲೆಂದು ಶ್ರೀತಾಮ್ರಪರ್ಣೀಆಚಾರ್ಯರನ್ನು ಪ್ರಾರ್ಥಿಸಿದಾಗ ಬಂದ ಉತ್ತರ ಈ ಗ್ರಂಥ. ಇದಕ್ಕೆ ಸರ್ವಧಾರ್ಮಿಕ ಜನವೃಂದ ಆಭಾರಿ.

ಈ ಗ್ರಂಥಕ್ಕೆ ಅನುಗ್ರಹಸಂದೇಶ ಕಳುಹಿಸಿಕೊಟ್ಟು ಧಾರ್ಮಿಕಸಾರ್ವಭೌಮತ್ವ ಸಾರಿದ ಶ್ರೀ1008 ಉತ್ತರಾದಿಮಠಾಧೀಶರಾದ ಶ್ರೀ ಸತ್ಯಾತ್ಮತೀರ್ಥಶ್ರೀಪಾದಂಗಳವರ ಸನ್ನಿಧಿ-ಯಲ್ಲಿ ನಮ್ಮ ಅನಂತಾನಂತ'ಪ್ರಣಾಮಗಳನ್ನು ಮೊದಲಿಗೆ ಸಮರ್ಪಿಸುತ್ತೇವೆ. ಇದೇ ರೀತಿಯಾಗಿ ಅನುಗ್ರಹಸಂದೇಶವನ್ನು ಕಳುಹಿಸಿಕೊಟ್ಟ ಪರ್ಯಾಯಪೀಠಸ್ಥರಾದ ಶ್ರೀಕೃಷ್ಣಾಪುರ ಮಠಾಧೀಶರಾದ ಶ್ರೀ108 ವಿದ್ಯಾಸಾಗರತೀರ್ಥಶ್ರೀಪಾದಂಗಳವರಿಗೆ ನಮ್ಮ ಹೃತ್ಪೂರ್ವಕ ನಮನಗಳು. ಶ್ರೀಪಲಿಮಾರು ಮಠಾಧೀಶರಾದ 108 ಶ್ರೀವಿದ್ಯಾಧೀಶ ತೀರ್ಥ ಶ್ರೀಪಾದರು ಪ್ರಚಲಿತವಿವಾದಕ್ಕೆ ಉತ್ತರನೀಡಿ ಪ್ರಮಾಣಗಳ ಹಿರಿಮೆಯನ್ನು ಧೃಢಪಡಿಸಿ ಅನುಗ್ರಹಿಸಿದ್ದು ಒಂದು ಹೆಮ್ಮೆಯ ವಿಚಾರ. ಇವರಿಗೆ ನಮ್ಮ ಶತ ನಮಸ್ಕಾರಗಳು. ಶ್ರೀ ಭಂಡಾರಕೇರಿ ಮಠಾಧೀಶರಾದ ಶ್ರೀ108 ವಿದ್ಯೇಶತೀರ್ಥಶ್ರೀಪಾದಂಗಳವರಲ್ಲಿ ನಮ್ಮ ಸವಿನಯ ನಮಸ್ಕಾರಗಳನ್ನು ಸಮರ್ಪಿಸುತ್ತೇವೆ, ಇವರು ಕೊಟ್ಟ ಲೇಖನ ವಿದೇಶ-ಯಾತ್ರೆಯಿಂದಾಗುವ ಪರಿಣಾಮವನ್ನು ಎತ್ತಿ ತೋರಿಸಿ ಈ ಗ್ರಂಥಕ್ಕೆ ಮೆರಗು ನೀಡಿದೆ.

ಪ್ರಸನ್ನಗಂಭೀರವಾದ ಉತ್ತಮ ವಿಷಯಗಳನ್ನೊಳಗೊಂಡ ಮುನ್ನುಡಿ ಲೇಖನವನ್ನು ಕೊಟ್ಟ ಶ್ರೀಪರಮಪೂಜ್ಯ ಮ॥ಶಾ॥ಸಂ॥ ಜಾಲಿಹಾಳಕೇಶವಾಚಾರ್ಯರು ಅನುಗ್ರಹಮಾಡಿದ್ದು ನಮಗೆ ಬಹಳ ಸಂತೋಷದಾಯಕ . ಅವರಿಗೆ ಅನಂತ ನಮಸ್ಕಾರಗಳು .

ಇದೇರೀತಿಯಾಗಿ ಪೂಜ್ಯಗಂಗೂರ್ ಶ್ರೀರಾಘವೇಂದ್ರಾಚಾರ್ಯರನ್ನು ನಮಸ್ಕರಿಸಿ ಪ್ರೌಢವಿಷಯ ಪ್ರತಿಪಾದಕವಾದ ಲೇಖನವನ್ನು ಹೃದಯ ಪೂರ್ವಕವಾಗಿ ಬರೆದುಕೊಟ್ಟ ಮಧ್ವಶಾಸ್ತ್ರಸಂಪನ್ನರಾದ ಶ್ರೀ ಬಾಳಗಾರು ಶ್ರೀನಿವಾಸಾಚಾರ್ಯರನ್ನು ನಮಸ್ಕರಿಸುತ್ತೇವೆ .

ಈ ಗ್ರಂಥದ ಬಗ್ಗೆ ಪ್ರೌಢವಾದ ವಿಮರ್ಶಾತ್ಮಕಲೇಖನಗಳನ್ನು ಕಳುಹಿಸಿಕೊಟ್ಟು ಸಹಕರಿಸಿದ ಡಾ.ಆನಂದತೀರ್ಥ ನಾಗಸಂಪಿಗೆ ಆಚಾರ್ಯರು ,ಪಂ.ಶ್ರೀರಾಜಾ ಗಿರಿಯಾಚಾರ್ಯರು , ಪೂರ್ವಮೀಮಾಂಸಾ ವಿದ್ವಾನ್ ಶ್ರೀರಾಮಶರ್ಮರು , ಪಂ.ಮಣಿದ್ರಾವಿಡರು ಇವರೆಲ್ಲರಿಗೂ ನಾವು ಸದಾ ಆಭಾರಿಗಳಾಗಿದ್ದೇವೆ .

ಮುಖಪುಟವಿನ್ಯಾಸವನ್ನು ಸುಂದರವಾಗಿ ಮಾಡಿಕೊಟ್ಟ ಕೆ. ಎಂ. ಶೇಷಗಿರಿ ಅವರಿಗೂ ಮತ್ತು ಅಕ್ಷರಸಂಯೋಜನೆಯನ್ನು ಮಾಡಿಕೊಟ್ಟ ಅಂಜನಪ್ರಸಾದ ಅವರಿಗೂ , ಹಾಗೂ ಪುಟವಿನ್ಯಾಸ ಮಾಡಿಕೊಟ್ಟ ಕೆ.ಸುಬ್ಬಣ್ಣ ಅವರಿಗೂ ನಮ್ಮ ಅಭಿನಂದನೆಗಳು . ಈ ಗ್ರಂಥದ ಪ್ರಕಟನೆಗೆ ಪರೋಕ್ಷವಾಗಿ ಅಥವಾ ಅಪರೋಕ್ಷವಾಗಿ ಸೇವೆ ಸಲ್ಲಿಸಿದ ಸಕಲಸಜ್ಜನರಿಗೂ ಜ್ಞಾನ ಭಕ್ತಿವೈರಾಗ್ಯಪೂರ್ವಕ ಆಯುರಾರೋಗ್ಯ ಐಶ್ವರ್ಯಗಳನ್ನು ಮತ್ತು ಶ್ರೇಯೋಭಿವೃದ್ಧಿಯನ್ನು ಶ್ರೀಕೃಷ್ಣ ಪರಮಾತ್ಮ ದಯಪಾಲಿಸಲಿ ಎಂದು ಪ್ರಾರ್ಥಿಸುತ್ತೇವೆ .

ಶ್ರೀನಿವಾಸಾಚಾರ್ಯ ತಾಮ್ರಪರ್ಣೀ — ಅಧ್ಯಕ್ಷರು

ಶ್ರೀಕರಾಚಾರ್ಯ ತಾಮ್ರಪರ್ಣೀ — ಕಾರ್ಯದರ್ಶೀ

ಸನಾತನಧರ್ಮಸಂರಕ್ಷಣಾ ಟ್ರಸ್ಟ್ (ರಿ)

# FORE-NOTE
# FOR THE NEW GENERATION

आपादमौलिपर्यन्तं गुरूणामाकृतिं स्मरेत् ।
तेन विघ्नाः प्रणश्यन्ति सिद्ध्यन्ति च मनोरथाः ।।

Despite writing (publishing) a book on implications of Foreign Travel in Sanskrit, it is felt something is still wanting (missing) in some sections of our society relating to the meaning and principles of our **Dharma Shastras**. Many of them are still under the clouds of confusion, perhaps owing to limited or inadequate exposure to Sanskrit language. In order to address this shortcoming an English version considered desirable . Hence this exercise. As a prelude, it would be in the fitness of things first to deal with well-known and general Pramanas before embarking on those specifically which prohibit foreign travel. "Quotes" from Dharma Shastras are given in Sanskrit along with kannnada versions. Here only the objections raised are replied.

This necessity has arisen as some sections of the society who are familiar with these Pramanas and have already travelled abroad, for whatever reasons best known to them, are keen on studying our **Dharma Shastras.** In their eagerness to defend their acts and to justify themselves for having gone abroad they are trying to read the verses of our Pramanas between lines and interpret them in favour of their travel. Such misleading tactics are only to confuse the gullible masses. Under these circumstances, it is to deal with the issues effectively lest more and more "**Sathvika Jeevas**" deceive themselves and fall into the trap.

Let us deal with the issues one by one.

**1.** Quotes from "Mimamsa" such as 'Satyamvada', 'Vrihlnhavayanti' and others like performing of 'Sandhyavandane' in Mukhyakaala and/or Gaunakaala and also Dharmic injunctions on residing in 'Punyadesha' are brought into focus seeking Pramanas?

**Ans:** Amongst numerous 'Vidhis' attention is drawn to 3 main Vidhis, namely

» Apoorva Vidhi

» Niyama Vidhi

» Parisankhya Vidhi

**Apoorva Vidhi:**

When a Vidhi deals with a subject which is not known through other Pramanas it is called Apoorva Vidhi wherein the subject matter is totally new.

For instance in the ritual Sandhyavandhane, the kaala (Mukhyakaala/ prime time) is fixed. However Shastra permits a person who violates this time norm to perform Sandhyavandhane in other kaala (Gaunakaala) also by offering "Prayaschitha Arghya" (advent of new Vidhi)

This action by the violator is not of his Volition but stipulated by Vidhi. No one else other than the **Shastra/Vidhi** itself is eligible to violate or modify this rule.

**Niyama Vidhi:**

Unlike Apoorva Vidhi, Niyama Vidhi explicitly stipulates Do's and Don't's. It insists on one to do the right things and not to indulge in wrong doings. This Vidhi candidly prohibits an untutored volunteer from following a wrong path.

"Satyamvada" is one such Niyama Vidhi. People are in the habit of speaking truth or falsehood knowingly or unknowingly but Shastra insists that only the truth is to be spoken and not otherwise. This is true of 'Vrihlnhavayanti' also. In seperation of grain from the husk (dehusking), it goes without saying that the **Shastras** injunction is only to thrash to obtain grain and not to follow other methods.

**"Yethan Deshan Samshrayeran" (one should reside only in these Deshas)** also falls under Niyama Vidhi. This Vidhi does not impose any restriction for a person to live in some Desha but however it stipulates that if a person desires to perform Vihita Karma it is incumbent upon him to be in a particular desha only as dictated by the Vidhi and not else where. Any other Pramanas if available on the Videsha travel or residing there becomes Gauna, for the simple reason that no Pramana permits a Dwija for going abroad or residing there under any circumstance. To get a better understanding and wide spectrum it is desirable to study **"Poorvamimamsha Shastra".**

**2.** The Stipulations by Smritis on Nishidha Desha prohibits all natives of Bharata from going abroad. However they allow the Shudras

to reside anywhere during his 'Apathkala'. The livelihood for him becomes more important than living in a particular Desha. If the same 'Apathkala' confronts Dwija what should he do?

**Ans:** Smritis allow Shudra to go to Videsha (foreign land) in Apathkala and not the Dwija. Smritis opine that Dwija should not go out of Yanjniya desha. Therefore it becomes quite clear that the importance attached to livelihood far exceeds the deshavasa for a Shudra while it is vice-versa for Dwija. In other words for Shudra the livelihood will have precedence over deshavasa. Significantly the Dwija should not cross the border or transgress the Shastra Vidhis for the sake of livelihood. The essence behind these Smritis is to depict the significance attached to the Dwija's observance of Varnashrama Dharma than that of a Shudra. The adherence to the Varnashrama Dhrama by the Dwija far outweighs that of the Shudra. Consequently it is apparent that the loss incurred by the Shudra for border crossing is less.

3. Bhodayana Sutra prohibits Samudrayana (Sea Travel) in general. The term in general (Samanya shabdha) includes all the possible Visheshas. But the question is whether the Sea travel includes Air travel also. Sea travel may be considered as Air travel only if the texts mention those. For example travel on land is never considered as air travel. These days travellers use airways only. That being so what prevents us from considering the prohibition on sea travel does not refer to travel through air?

**Ans:** First of all one should understand that Sea travel does not denote a mode of travel. The modes of travel can be categorised as by land, air and water. The water travel is included in the modes of travel but not sea travel. If sea travel is considered as water travel then travel on river has also to be prohibited which is against our Shistachara. Ultimately the term 'WATER' noted in the water travels denotes the mode of travel whereas the term SEA (OCEAN) noted in the word Sea travel denotes only travel associated with sea. Consequently any travel associated Sea comes under the prohibited category. Therefore there is no need to reduce the said general prohibition to travel only on the sea by using a boat or a ship or a submarine because no such Pramana is available on which we may base the reduction. Otherwise, somebody may start to reduce further and say only submarine travel is prohibited.

**'Samudrayana'** as it is term which denotes travel associated with Sea. Travel by plane, by ship, by boat, swimming or a bridge over the

sea is nishedha when relativity is considered not because such travel is over the sea but because such travel is associated with the sea.

For example : "Napalandum bhakshayita" is a Nishedha. Bhakshanam (consume) means eating by crushing with teeth. If some body says "I will eat onion by making it into a juice in order to avoid 'nishedha' and to escape punishment", what would be the position in such a ticklish event?. If Bhakshanam includes all possible acts for intake of Palandam, the same /similar possibilities apply incase of **'Samudrayana"** also. Likewise the same/similar rule is applicable in case of **'Surapana'** too wherein some one may consume sura like wine, illicit liquors etc etc mixed with other eatables to avoid nishedha. Therefore it becomes inevitable to understand the Tatparya (the essence) of Vidhi and Nishedha and act accordingly. Arguments would be endless if conclusions are based on intransigencies and resorting to reading between lines.

In conclusion **Samudrayana which is travel on, over, in or under the samudra; all four being associated with sea are prohibited under our Dharma Shastras**. It is unfortunate that one is not still convinced.

4. In Krishnamrutha Maharnava Srimadhwacharya quotes a sloka from Purana.

म्लेच्छदेशेऽशुचौ वापि चक्राङ्को यत्र तिष्ठति ।
योजनानि तथा त्रीणि ममक्षेत्रं वसुन्धरे ।।

Where in lord Varaha narrates to Bhudevi that the Chakrankita or a Saligrama is so holy even when it is in Mlechhadesha or in any other impure place. An area upto 3 yojanas covered around it becomes the Vaishnava Kshetra. Thus the above sloka makes Mlechhadesha also gamya.

For example: Under the Dharma Shastra, the Vidhi Nishedha considers the differentiation between a Hari Bhakta and a non-Hari Bhakta. Likewise the said sloka gives an 'upayantara (alternative)' ie a way out from the prohibition of Videshayana?

**Ans:** The text quoted by SriMadhwacharya itself is not contradictory to the general prohibition because it is not niravakasha. It can be commented upon in the other way also. Let's delve on the meaning of the text quoted by SriMadhwacharya.

Yojanani threeni —— According to some Puranas one Yojana is equivalent to 12 miles. Therefore the Vaishnava Kshetra as per the text quoted constitutes 3 * 12 = 36 miles radius. What precisely that this sloka/text convey?

Is it the whole land irrespective of any variants where the Chakrankita lies eligible for performing each and every kind of Sathkarma(Vihitakarma)? Or is there any provision for Sankocha (reduction)?

It is prudent to consider the intrinsic meaning of the expression Yojananithreeni to understand the underlying or genuine purpose behind it. For, no sensible person would like to perform religious rituals (Vihita Karmas) like Deva pooja, Marriage, Upanayana etc. in cemetery (cremation ground), toilets etc... not withstanding the fact that these places also come within the precincts(ambit) of the Yojananithreenis. It is observed if anyone concurs to perform Vihita Karmas in such profane (forbidden) surroundings. Obviously, it goes without saying and to reiterate that such places are necessarily to be abandoned, as they are ineligible for performing a wholesome Vihita Karma (Sathkarma) and further it becomes mandatory to accept a reduction in performing them at these places. Applying the same principle and to be in conformity with our Shishtachara (systems & procedures) only a few Sathkarmas like Harinamasmarane can be undertaken and not the wholesome Varnashrama Karmas in Mlechhadesha.

*Sri Madhwacharya says : "Na Bhagavathseva Sudhurachaaraha bhagavadbhakthakaha*

This niyama (rule) applies only to the natives i.e. the original inhabitants who live there and not to the Dwijas, the migrants, from punya desha who are prohibited to go or live there. A Dwija who goes there along with a Chakrankita and who violates the norm becomes a Patitheya (a non-hari bhaktha) and is allowed to perform only Harinamasmarane and not other Varnashrama Dharmas like Sandhyavandhane etc. The very fact that our Pramanas prohibit Dwijas visit to foreign countries besides performing of Varnashrama Karmas, he is naturally bound to lose his Dwijathva (brahmanya) and hence becomes a non-brahmin (non-Dwija) although he carries with him the Chakrankita. It is very incidental to stress that the said sloka neither confirms any privilege nor offers a provision for Dwija to visit Mlechhadesha not withstanding the fact that the Chakrankita Sannidhana in may deem to purify those deshas.

Further in the light of the foregoing, it is not out of context to reiterate that indepth knowledge of our Shruthis and Smrutis, Puranas, Vedas etc. becomes a prerequisite to ferret out precise intrinsic and genuine meanings embedded in them.

5. If any travel related to **Samudra** is 'SAMUDRA YATRA' then any thing related to deadbody should be termed as 'SHAVA YATRA'. Therefore generalising the samudrayana is not fair?

**Ans:** There are various types of yatras enunciated in Sanskrit Sahitya such as Theertha Yatra , Ratha Yatra , Shava Yatra, Samudra Yatra ,Vimana yatra, Punya Yatra etc etc. In order to get the exact (precise)meaning of these one should go through and be thoroughly conversant with 'KARAKA PRAKARANA OF VYAKARANAM. 1)Theerthasya Yatra karmani Shashti 2) Rathe Rathenava Yatra = Karne thrithiya, Oupashloka saptami 3) Shava Yatra = Shavasya Yatra =Karthari Shashti 4)Samudrasya Yatra sambandha samanye shashti 5)Vimanath Yatra - Lyablopa nimitta -Panchami. Vimana Marutra Yatra ityarthaha . 6)Punyaya Yatra = Udyeshyarthe Chaturthi and their Vyuplanthi according to vyakarana before raising objections. It is necessary to note the differences in meanings in similar prayogas.

Conclusively, on the same methods as adopted above should understand the spirit of Dharmashastra without any bias. It is also mandatory to follow rules and regulations of other "Angashastra's (Co-related )" like Purva Mimamsa ,Vyakarana while deciding the spirit ie tatparya of the Dharma Shastras.

All these should not go against the Sishtachara. To deride our Ancient Munis (sages) and forefathers as 'Avivekhi(imprudents)' is a void. Let us not impugn them by our acts of indiscrition as it would only exhibit our ignorance and indignation.

Every Human being , especially the devout disciples of Sri MADHWACHARYA should always remember that this Manusha Sharira (Human Body)is a Boon gifted by the GOD to pursue the 'MOKSHA SADHANA' and do the relevant needs accordingly, instead of indulging in going astray to derive wordly pleasures.

Let us pray LORD SRI HARI and Guru Sri MADHWACHARYA to bestow upon us enough strength and vigour to perform their SEVAS.

**C.S. SRINIVASACHARYA TAMRAPARNI**

# विषयानुक्रमणिका

# ವಿಷಯಾನುಕ್ರಮಣಿಕೆ



– – –

श्रीः

।। श्रीगुरुभ्यो नमः।। ।। हरिः ओं ।।

श्रीहनुमद्भीममध्वान्तर्गतरामकृष्णवेदव्यासात्मकलक्ष्मीहयग्रीवाय नमः

# भारतमेव कर्मक्षेत्रम्

ताम्रपर्णी श्रीनिवासाचार्यप्रणीतः

## सत्कर्मक्षेत्रनिर्णयः

आपादमौलिपर्यन्तं गुरूणामाकृतिं स्मरेत् ।
तेन विघ्नाः प्रणश्यन्ति सिद्ध्यन्ति च मनोरथाः ।।

करोतु मम कल्याणं हरिर्हयमुखाभिधः ।
गुरुश्च मध्वनामा मे वरदोऽस्तु निरन्तरम् ।।

हयग्रीवं देवं निखिलगुणपूर्णं च विमलम् ।
भजेऽहं श्रीमध्वं श्रुतिविनुतविज्ञानममलम् ।।

यदादेशायत्तस्तदनुचरसत्साधकजनो ।
निजां भक्तिं प्राप्य स्वविहितसुवृत्त्याऽस्ति परया ।।

टीकाकृद्व्यासतीर्थान् श्रीराघवेन्द्रमुखान् गुरून् ।
सेवे सत्ध्यानतीर्थान् यत्कृतिर्धर्मे प्रमाणकम् ।।

भक्त्यादिगुणसंपन्नान् जालिहाळगुरून् भजे ।
यत्पादसंस्मृतेः शिष्याः धर्मशिष्टा भवन्त्यहो ।।

श्रीरामो यदुनन्दनश्च भृगुजः श्रीधार्मनारायणः
वेदव्यासमुखा हरेः सुतनवो यत्रावतेरुर्मुदा ।
श्रीमध्वो हनुमान् वृकोदरमुखा राजर्षिदेवर्षयः
सेयं भारतपुण्यभूमिरतुला जीयान्मुकुन्दाश्रया ।।

श्रीमतो भगवतः करुणाकरस्य परिपूर्णनिखिलकल्याणगुणस्य निर्दोषचिदानन्दस्वरूपस्य जन्माद्यष्टककारणस्य श्रीलक्ष्मीरमणस्य

श्रीनारायणस्य परमप्रसादादेव हि अपारदुःखभूयिष्टात् घोरादस्य जीवजातस्य संसारकूपारात् मुक्तिरिति निश्चप्रचं वेदशास्त्राणां तात्पर्यम् । तदुक्तं "**यस्य प्रसादात् परमार्तिरूपादस्मात् संसारान्मुच्यते नापरेण** " इति । सोऽपि शास्त्रानुसारं समनुष्ठितविहितकर्मणः दूरीकृतनिषिद्धदुराचारस्य अत एव धार्मिकपदोक्तस्यैवं शुद्धान्तःकरणस्य श्रवणादिभिरासादितभगवदपरोक्षस्य अतिपरिपक्वभक्तेः विषयविषविषये सञ्जातविरागस्य सात्विकसाधकस्यै-वेश्वरेच्छाबलादभिव्यज्यते इति। तच्चोक्तं '**नाचारेण विना ज्ञानं**' '**विना ज्ञानं कुतो भक्तिः**', '**नाविरतो दुश्चरितात्** ' इत्यादि (गीता भाष्ये९-३१) '**कर्मणा ज्ञानमातनोति**'। '**ब्रह्मवेदननिविष्टचेतसां कर्म तत्र करणान्तरं भवेत्**' (सुमध्वविजये -९सर्गे-५१श्लोके) "**नियतं कुरु कर्म त्वं**" (भगवद्गीता-३-५ )" **कुरु कर्मैव तस्मात्त्वं पूर्वैः पूर्वतरं कृतं** (गीता४-१५ ) इत्यादिपरःशतप्रमाणैः विहितकर्माचरणस्य श्रीहरिप्रीतिकरत्वोक्तेः ।। "**तत्कर्म हरितोषं यत्**" (भागवते-१-२)इति वचनाच्च ।। वेदशास्त्रेषु वर्णाश्रमविभागशः नियतं कर्म तत्तदुचिततया अवश्यानुष्ठेयम् । अन्यथा हरिप्रीतिविरोधात् नरकाद्यनर्थप्राप्तेः । उक्तं चेदं गीतायाम् –

**नियतस्य तु सन्न्यासः कर्मणो नोपपद्यते ।**
**ततः स्वधर्मं कीर्तिं च हित्वा पापमवाप्स्यसि ।।**

अभिहितं चेदं भगवत्पादैः **स्वविहितवृत्त्या भक्त्या भगवदाराधनमेव परमो धर्मः** इति। शिष्टानां वर्णाश्रमोचितसद्धर्मानुष्ठानं देशकालोपायद्रव्य-श्रद्धपात्रत्यागादीनपेक्षते । एतेषां शुद्धिमनुसृत्य हि साधकस्य धर्मोदयः । नान्यथा। तदुक्तं शङ्खलिखिते (वीरमित्रोदये १भागे-५३पुटे) '**धर्मलक्षणानि-देशः, कालः, उपायः, द्रव्यं, श्रद्धा, पात्रं, त्यागः । समस्तेषु सत्सु धर्मोदयः साधारणः अन्यथा विपरीतः। श्रद्धापात्रसंपन्नो धर्मः कालापेक्षः श्रद्धाद्रव्योत्पत्तिः इति कालः तन्मूलो देशः इति ।**

व्याख्यातं चैतत् वीरमित्रोदये । एवंभूतकालसंपन्नो यःकश्चन अनिषिद्धो देशः धर्मस्य कारणमित्याह तन्मूलो देशःइति ।

सोऽयं कर्मादिफलसंसिद्धिहेतुरिति हेतोरेवानिषिद्धोऽयं देशः कर्मभूमि शब्देनव्यपदिश्यते ।कर्मफलसाधनभूमिरिति सोऽयंकर्मादिफलसंसिद्धिहेतुरिति हेतोरेवानिषिद्धोऽयं देशः कर्मभूमिशब्देन व्यपदिश्यते । कर्मफलसाधनभूमि रिति तदर्थः । अस्याः महत्वमुक्तं विष्णुपुराणे (वीरमित्रोदये ५५ पुटे )

**अत्रापि भारतं श्रेष्ठं जम्बूद्वीपे महामुने ।**
**यतो हि कर्मभूरेषा ह्यतोऽन्या भोगभूमयः।।**
**अत्र जन्मसहस्राणां सहस्रैरपि सत्तम ।**
**कदाचिल्लभते जन्तुः मानुष्यं पुण्यसंचयात् ।**
**कर्मभूमिरियं स्वर्गमपवर्गंच गच्छतां** । इति ।

श्रीमदाचार्यजन्मभूमिमहत्ववर्णनावसरे चैतदेवोक्तं सुमध्वविजये **सद्वीपवारिनिधिसप्तकभूतधात्र्या मध्येऽपि कर्मभुवि भारतनामखण्डे** इति। श्रीमद्भागवते पञ्चमस्कन्धे **अत्रापि जम्बूद्वीपे भारतमेव वर्षं कर्म-क्षेत्रम् । अथान्यान्यष्टवर्षाणि स्वर्गिनां पुण्यशेषोपभोगस्थानानि** इति । मार्कण्डेये च भारतमेव कर्मफलसाधनभूमिः नान्यत् । देवादीनामपि एतदेव साधनं इति स्पष्टमुक्तेश्च । तथाहि-**मार्कण्डेये ५७ अध्याये** ।।

**भद्राश्वभारताद्यानि पत्राण्यस्य चतुर्दिशम् ।**
**भारतं नाम यद्वर्षं दक्षिणेन मयोदितम् ।**
**तत्कर्मभूमिर्नान्यत्र सम्प्राप्तिः पुण्यपापयोः ।**
**एतत्प्रधानं विज्ञेयं यत्र सर्वं प्रतिष्ठितम् ।।**
**तस्मात्स्वर्गापवर्गौ च मानुष्यनरकावपि ।**
**तिर्यक्त्वमथ वान्यच्च नरः प्राप्नोति वै द्विज ।।**
**तदेतद्भारतं वर्षं सर्वबीजं द्विजोत्तम**
**ब्रह्मत्वममरेशत्वं देवत्वं मर्त्यतां तथा ।**

**प्रयाति कर्मभूर्ब्रह्मन् *नान्या लोकेषु विद्यते*। इति ।**

तदनेन स्पष्टं भारतं वर्षमेव कर्मभूमिः नान्यद्वर्षमिति।

**कर्मभूमिपरिष्कारः**

ननु केयं कर्मभूमिः ? किमिदं तत्वम्? इति । कर्मफलसाधनभूमिरिति चेत्, तर्हि तदन्यत्र विदेशेषु कृतानां कर्मणां पुण्यपापासाधनत्वप्रसङ्गः । ततश्च अत्र भारते कलियुगे स्वत एव पुण्यं अल्पं, पापं च बहु इति एतद्वासापेक्षया विदेशगमनम् एवोचितं स्यात् । यतो विदेशेषु कृतं कर्म निष्फलमिति चेत् मैवम्। **यतोऽधिकारिकृतस्वस्ववर्णाश्रमोचितकर्मणां स्वर्गापवर्गदेवत्व–वैष्णवजन्मादि फलसाधनभूमिरिति तदर्थः**। पुण्यपापकर्मणोर्मध्ये पुण्यकर्मण एव प्रधानत्वात्। दुर्योधनकृतदुष्कर्मतोऽधर्मसाधनत्वे अपि कुरुक्षेत्रस्य धर्मक्षेत्रत्ववत्। अकर्मभूमिरपि द्विविधा। देवादीनां पुण्यफल–भोगप्रधानभूमिरेका । अतिशय पापहेतुरपरा। तत्राद्या स्वर्गादिःहरिवर्षादिः । द्वितीया अमेरिकादिविदेशः। अत एवोत्तमाधिकारिभिरपि एतद्भारतवर्षमेत्यैव स्वोचितसाधनानि कर्तव्यानि इति–**अहो श्रीमद्भारतमहिमा**।

अवलोकनीयमस्मिन्विषये श्रीमद्भागवतम् ।।

**अस्मिन्नेव वर्षे (भारते) लब्धजन्मभिः शुक्ललोहितकृष्णवर्णेन स्वारब्धेन कर्मणा दिव्यमानुषनारकगतयो बह्व्य आत्मन आनुपूर्व्येण सर्वा ह्येव सर्वेषां विधीयन्ते। यथा वर्णविधानमपवर्गश्चापि। योऽसौ भगवति सर्वभूतात्मनि अनात्म्येऽनिरुक्ते अनिलयने परमात्मनि (भगवति) वासुदेवे अनन्यनिमित्तभक्तियोगलक्षणो नानागतिनिमित्ता विद्याग्रन्थिरन्धनद्वारेण भवति यदा हि महापुरुषसङ्गतिः ।**

एतदेव हि देवा गायन्ति ।

**अहो बतैषां किमकारि शोभनं प्रसन्न एषां स्विदुत स्वयं हरिः।**
**यैर्जन्म लब्धं नृषु भारताऽजिरे मुकुन्दसेवौपयिकस्पृहात्मभिः ।।**

कल्पायुषां स्थानजयात् पुनर्भवात् क्षणायुषां भारतभूजयो वरः ।
क्षणेन मर्त्येन कृतं मनस्विनः सन्यस्य संयान्त्यभयं पदं हरेः ।।
इत्यादि । समाख्यातं चैतत् बृहन्नारदीये ३अध्याये ६५-७१ श्लोकेषु । तथाहि–

'संप्राप्य भारते जन्म सत्कर्मसु पराङ्मुखः ।
पीयूषकलशं मुक्त्वा विषभाण्डमुपाश्रितः ।
कर्मभूमिं समासाद्य यो न धर्मं समाचरेत् ।
स च सर्वाधमः प्रोक्तः वेदविद्भिः मुनीश्वर ।
एवं भारतभूभागं प्रशंसन्ति दिवौकसः ।।
ब्रह्माद्याः अपि विप्रेन्द्र स्वभोगक्षयभीरवः ।
तस्मात्पुण्यतमं ज्ञेयं भारतं वर्षमुत्तमम् ।।
देवानां दुर्लभं वापि सर्वकर्म फलप्रदम् ।
अस्मिन्पुण्ये च भूभागे यस्तु सत्कर्मसूद्यतः ।।
न तस्य सदृशः कश्चित् त्रिषु लोकेषु विद्यते ।।' इति ।

ततश्चायं अभिसन्धिः सिद्धो भवति । देवादयो यत्र जन्म प्रार्थयन्ते, लब्धजन्मानश्च ते नानाविधसेवाभिः श्रीहरिप्रीतिं काङ्क्षन्ते, कृतसाधनाश्च भवन्ति, सेयं भारतभूमिः अत्यन्तं पुण्यतमा साधकसज्जनसाधनाङ्गम्। तत्परित्यागः तत्र स्थित्वाऽपि कर्मपरित्यागः भगवत्प्रीतिविरोधी, नरकाद्यनर्थहेतुरित्यर्थः। बहुपुण्यसञ्चयसाध्या चात्र जनिरित्यतो नैतद्देशं परित्यज्य पातित्यादिहेतुः विदेशगमनं साधुभिः आश्रयणीयम्। तस्य वर्णाश्रमोचितकर्माधिकारनाशकत्वात् विदेशानां वर्णाश्रमधर्माङ्गत्वाभावात् तत्र गमने कर्मलोपेन पातित्यमिति भावः। उपपाद्यते चैतदुत्तरत्र।

### भारतवर्षनिर्णयः

ननु किं भारतवर्षं ? कियती च तत्परिमितिः? कोऽयं विदेशः यद्गमनमनर्थहेतुः इत्युच्यते ? को वा प्रत्यवायः? इति चेदुच्यते। हिमवत्पर्वतात् दक्षिणे , समुद्रादुत्तरत्र, सिन्धुनद्याः पूर्वतः, सूर्योदयपर्वतात् पश्चिमे विद्यमानो भूभागः भारतवर्षं नाम । तदुक्तम्–

**उत्तरं यत्समुद्रस्य हिमाद्रेश्चैव दक्षिणम्**
**वर्षं तद्भारतं नाम भारती यत्र सन्ततिः ।**
**[१]नवयोजनसाहस्रो विस्तारोऽस्य महामुने ।**
**कर्मभूमिरियं स्वर्गमपवर्गं च गच्छताम् ।।** इति विष्णुपुराणे ।

अस्य भारतस्य दिक्त्रये समुद्रसद्भावात् द्वीप इति व्यपदेशोऽपि अस्ति। तथाहि---

**योजनानां सहस्रं[२] तु द्वीपोऽयं दक्षिणोत्तरात् ।**
**पूर्वे किराताः यस्यान्ते पश्चिमे यवना स्मृताः । –मार्कण्डेयपुराणे**

अस्यायमर्थः । अयमिति प्रत्यक्षतः सहस्रयोजनपरिमितः। पूर्वदिशि किराताः पश्चिमे यवनाः तुरुष्का(मुस्लीम्स्)सन्ति इति । अयं भारतदेशः आर्यावर्त, मध्यदेश, दक्षिणावर्तेति त्रेधा विभक्तः । तत्परिमितिः अपि अभिहिता। तथाहि **प्रागदर्शनात् प्रत्यक्कालकवनात् दक्षिणेन हिमवन्त-मुदक्पारियात्रमेतदार्यावर्तं तस्मिन् य आचारः स प्रमाणं** (बोधायन-धर्मसूत्र-२-१०) यत्र सरस्वती नदी अदर्शनमेति तदुच्यतेऽदर्शनमिति । ततः प्राग्दिशि विद्यमानभूभागः। कालकवनं उदयपर्वतेति पुराणप्रसिद्धपर्वतीयं वनम् । ततः प्रतीच्यां दिशि । पारियात्रं विन्ध्यपर्वत इति केचित्। परं तु यात्रा यद्देशे परितो भवति तत्परियात्रम् (कन्याकुमारीक्षेत्रं )पूर्वोक्तम् ।

अयं च महार्यावर्तो देशः। किंचिद्वैलक्षण्येन मनुः ब्रह्मावर्तं प्राह – तथाहि

**सरस्वतीदृषद्वत्योःदेवनद्योर्यदन्तरम् ।**
**तं देवनिर्मितं देशं ब्रह्मावर्तं प्रचक्षते ।।**

---

१. **नवयोजनसाहस्रः विस्तारः** ९००० square योजनानि इत्यर्थः । **योजनं**= 12Miles. 1mile = 1.6 kms. \Sq. root of 9000 = 94.86832381 12 1.6 = 1821.471932 1821.471932=3317760sq kilometres . India as on today 3287300 .. sqkm ..

२. *योजनानां – इदं २ मैल् परिमितं योजनमिति भाति १००० २ १.६=३२००. kilometer distance भाति। अन्यथापूर्वपश्चिमात् केवलं नवयोजनानीति स्यात्। अतः बहुविधयोजनापद्धतिरस्तीति योज्यम् ।।

**हिमवद्विन्ध्ययोर्मध्यं यत्प्राग्विनशनादपि ।**
**प्रत्यगेव प्रयागाच्च मध्यदेशः प्रकीर्तितः ।।**
**आसमुद्रात्तु वै पूर्वात् आसमुद्रात्तु पश्चिमात्. ।**
**तयोरेवान्तरं गिर्योःआर्यावर्तं विदुर्बुधाः।।**

शिष्टो देशः दक्षिणावर्तः, एषु ब्रह्मावर्तः उत्तमः मध्यदेशो मध्यमः । अधमो दक्षिणावर्तः इति ज्ञेयम् । इदमन्यत्र अन्यधा प्रतिपादितम् ।।

**ब्रह्मावर्तः परो देशः ऋषिदेशस्त्वनन्तरः ।**
**मध्यदेशः ततो न्यूनः आर्यावर्तस्त्वनन्तरः ।।**

इति **भविष्यपुराणे**(वीरमित्रोदये ५५पुटे)। **'तस्मिन्देशे य आचारः पारंपर्यक्रमागतः वर्णानां सान्तरालानां स सदाचार उच्यते'** इत्युक्तेः ब्रह्मावर्तस्योत्तमत्वम् । मध्यदेशो मध्यमः **'नात्युत्कृष्टः नातिनिकृष्टः इत्यतोऽयं मध्यदेशः न तु पृथिवी मध्यभवत्वात्'** इति **मेधातिथ्युक्तेः**। एतद्देशेषु कृतानां शिष्टकर्मणां देशस्वरूपानुगुणफलोक्तेः स्वरूपत एवायं पुण्यदेशः। एतेन यत्केनचिदुक्तं 'जनदोषनिमित्तोऽयं देशदोषः न तु स्वभावतः एव कश्चन देशो दुष्टः' इति तत्प्रत्युक्तम् । म्लेच्छजनाकीर्णत्वं तु स्वभावत एव दुष्टदेशस्य दोषाधिक्यापादकमेव । अपरिग्राह्यतायां निमित्तान्तरं वा। शिष्टदेशेष्वपि यः प्रदेशः दुष्टजनाकुलः स परित्याज्यो वासाय किमुत अशिष्टप्रदेश इति कैमुत्योहाहेतुर्वा। अत एव जनशिष्टतादीन्यनवलंब्य परिग्राह्यदेशविभागः तत्परिमितिः तत्सीमादिकं चोक्तं संगच्छन्ते । तत एवोक्तं **मनुना** त्रिविधतया विभक्तशिष्टदेशस्य सामान्यलक्षणमभिदधता ।।

**कृष्णसारस्तु चरति मृगो यत्र स्वभावतः ।**
**स ज्ञेयो याज्ञियो देशः म्लेच्छदेशस्त्वतः परः ।।** इति ।
**बोधायने**नापि एतदेव ह्युक्तम् ।
**पश्चात्सिन्धुर्विसरणी यावत्सूर्यस्योदयनं पुरः ।**
**यावत्कृष्णो विधावति तावद्धि ब्रह्मवर्चसम् ।।** इति

ತಸ್ಯ ಸುಪ್ತಸ್ಯ ನಾಭೌ ತು ಮಹತ್ ಪದ್ಮಮಭೂತ್ಕಿಲ ॥
ಪದ್ಮಮಧ್ಯೇಽಭವತ್ ಬ್ರಹ್ಮಾ ವೇದವೇದಾಂಗಭೂಷಣಃ ।
ಸ ಚೋಕ್ತಃ ದೇವದೇವೇನ ಜಗತ್ಸೃಜ ಪುನಃ ಪುನಃ ॥
ಸೋಽಪಿ ಸೃಷ್ಟ್ವಾ ಜಗತ್ಸರ್ವಂ ಸದೇವಾಸುರಮಾನುಷಮ್ ।
ಯಜ್ಞಸಿದ್ಧ್ಯರ್ಥಮನಘಾನ್ ಬ್ರಾಹ್ಮಣಾನ್ಮುಖತೋಽಸೃಜತ್ ॥
ಅಸೃಜತ್ ಕ್ಷತ್ರಿಯಾನ್ ಬಾಹ್ವೋರ್ವೈಶ್ಯಾನಪ್ಯೂರುದೇಶತಃ ।
ಶೂದ್ರಾಂಶ್ಚ ಪಾದಯೋಃ ಸೃಷ್ಟ್ವಾ ತೇಷಾಂ ಚೈವಾನುಪೂರ್ವಶಃ ।
ಯಥಾ ಪ್ರೋವಾಚ ಭಗವಾನ್ ಬ್ರಹ್ಮಯೋನಿಂ ಪಿತಾಮಹಃ ।
ತದ್ವಚಃ ಸಂಪ್ರವಕ್ಷ್ಯಾಮಿ ಶೃಣು ತದ್ವಿಜಸತ್ತಮಾಃ ।
ಧನ್ಯಂ ಯಶಸ್ಯಮಾಯುಷ್ಯಂ ಸ್ವರ್ಗ್ಯಂ ಮೋಕ್ಷಫಲಪ್ರದಮ್ ।
ಬ್ರಾಹ್ಮಣ್ಯಾಂ ಬ್ರಾಹ್ಮಣೇನೈವಮುತ್ಪನ್ನೋ ಬ್ರಾಹ್ಮಣಃ ಸ್ಮೃತಃ ।
ತಸ್ಯ ಧರ್ಮಂ ಪ್ರವಕ್ಷ್ಯಾಮಿ ತದ್ಯೋಗ್ಯಂ ದೇಶಮೇವ ಚ ।
ಕೃಷ್ಣಸಾರೋ ಮೃಗೋ ಯತ್ರ ಸ್ವಭಾವೇನ ಪ್ರವರ್ತತೇ ।
ತಸ್ಮಿನ್ ದೇಶೇ ವಸೇತ್ ಧರ್ಮಃ ಸಿದ್ಧ್ಯತಿ ದ್ವಿಜಸತ್ತಮಾಃ ॥ ಇತ್ಯಾದಿ ।

ಶಾಶ್ವತವಾದ ವರ್ಣಾಶ್ರಮಧರ್ಮವನ್ನು ಹೇಳುತ್ತೇನೆ. ಸಾವಧಾನವಾಗಿ ಕೇಳಬೇಕು. ಹಿಂದೆ ಪರಮಾತ್ಮನಾದ ಸಮುದ್ರಾಂತಃಶಾಯಿಯಾದ ನಾರಾಯಣನು ತನ್ನ ನಾಭಿಕಮಲದಿಂದ ಚತುರ್ಮುಖ ಬ್ರಹ್ಮನನ್ನು ಸೃಷ್ಟಿಮಾಡಿದನು. ಆನಂತರ ದೇವತೆಗಳು, ದೈತ್ಯರು, ಮನುಷ್ಯರೇ ಮೊದಲಾದ ಸಮಸ್ತಜಗತ್ತನ್ನು ಸೃಷ್ಟಿಮಾಡಿದನು. ಯಜ್ಞಸಿದ್ಧಿಗಾಗಿ ಮುಖದಿಂದ ಬ್ರಾಹ್ಮಣರನ್ನು, ಬಾಹುಗಳಿಂದ ಕ್ಷತ್ರಿಯರನ್ನು, ತೊಡೆಯಿಂದ ವೈಶ್ಯರನ್ನು, ಪಾದದಿಂದ ಶೂದ್ರರನ್ನು ಸೃಷ್ಟಿಮಾಡಿ ಬ್ರಹ್ಮದೇವರಿಗೆ ಉಪದೇಶ ಮಾಡಿದನು. (ವರ್ಣಾಶ್ರಮಧರ್ಮದ ಉಪದೇಶವೇ ಪ್ರಸಕ್ತ) ಬ್ರಾಹ್ಮಣನಿಂದ ಬ್ರಾಹ್ಮಣಿಯಲ್ಲಿ ಹುಟ್ಟಿದವನೇ ಬ್ರಾಹ್ಮಣ. ಅವನ ಧರ್ಮ ಮತ್ತು ಅವನಿಗೆ ಯೋಗ್ಯದೇಶವನ್ನು ಹೇಳುತ್ತೇನೆ. ಎಲ್ಲಿ ಕೃಷ್ಣಸಾರಮೃಗವು ಸ್ವತಃ ಸಂಚರಿಸುತ್ತದೋ ಆ ದೇಶ 'ಭಾರತ' ಮಾತ್ರವೇ ವಾಸಮಾಡಲಿಕ್ಕೆ ಯೋಗ್ಯ. ಆಗ ಮಾಡುವ ಧರ್ಮವೇ ಸಫಲ ಎಂದು.

ಇಲ್ಲಿಯೂ ಕೂಡ ಭಾರತಕ್ಕೆ ಸ್ವರೂಪತಃ ವರ್ಣಾಶ್ರಮಾಚಾರಕಾರಣತ್ವವು ಬೇರೆದೇಶಕ್ಕೆ ಬರದಂತೆ ಉಕ್ತವಾಗಿದೆ. ಇಲ್ಲಿ ಒಂದಂಶವನ್ನು ನಾವು ಗಮನಿಸಬೇಕು. ಸಾಧಾರಣಧರ್ಮವರ್ಣಾಶ್ರಮಧರ್ಮ ಮೊದಲಾದ ಎಲ್ಲಾ ಧರ್ಮವೂ ಭಗವಂತನಿಗೆ ಪ್ರೀತ್ಯಾಸ್ಪದ. ಆದ್ದರಿಂದ ಎಲ್ಲವೂ ವೈಷ್ಣವಧರ್ಮ ಎಂದೆನ್ನಬಹುದು ಆದರೆ ಸಾಧಾರಣ ಧರ್ಮವು ಎಲ್ಲರಿಂದಲೂ ಅನುಷ್ಠೇಯವಾದ್ದರಿಂದ ಚಾತುರ್ವರ್ಣ್ಯದವರಿಂದಲೂ ಅನುಷ್ಠೇಯವೇ ಆಗಿರುತ್ತದೆ. ಚಾತುರ್ವರ್ಣ್ಯದಲ್ಲಿ ಬರದವರಿಗೂ ಸಾಧಾರಣಧರ್ಮ ಉಂಟು. ಅದಕ್ಕಾಗಿ ಕುರುಪಾಂಡವ ನ್ಯಾಯದಂತೆ ಇಲ್ಲಿ ವೈಷ್ಣವಧರ್ಮವರ್ಣಾಶ್ರಮ ಧರ್ಮ, ಸಾಧಾರಣಧರ್ಮ ಇತ್ಯಾದಿರೀತ್ಯಾ ವಿಂಗಡಿಸಿದ್ದೇವೆ.

ಉದಾ. 1. ಚಾತುರ್ವರ್ಣ್ಯ = ಬ್ರಾಹ್ಮಣರಿಗೆ ಸಂಧ್ಯಾವಂದನೆ . 2. ಸಾಧಾರಣ = ಬ್ರಾಹ್ಮಣರಿಗೂ ಮಿಕ್ಕ ಎಲ್ಲಾ ಆಶ್ರಮದವರಿಗೂ ಅಹಿಂಸೆ. ವೈಷ್ಣವ ಧರ್ಮ = ಹರಿಸ್ಮರಣೆ, ಇತ್ಯಾದಿ 'ಇಲ್ಲಿ ವರ್ಣಾಶ್ರಮಾಚಾರಪ್ರಸಂಗ ಬಂದಾಗ ಮಾತ್ರ ದೇಶವಿಚಾರ ನಿಯಮೇನ ಪ್ರಸ್ತಾಪಿಸುತ್ತಾರೆ. ಮುಂದೆ ಬೃಹದ್ಧಾರೀತಸ್ಮೃತಿಯಲ್ಲಿ ವೈಷ್ಣವ ಧರ್ಮದ ಪ್ರಶ್ನೆ ಬಂದಾಗ ದೇಶವಿಚಾರ ಬರುವುದಿಲ್ಲ . ಆದ್ದರಿಂದಲೇ ವಿಷ್ಣುಪ್ರೀತಿ ಜನಕವಾದ ತಪಸ್ಸು ಮುಂತಾದ ಕಾರ್ಯ ಸ್ವರ್ಗಾಪವರ್ಗದಲ್ಲೂ ಕಂಡು ಬರುತ್ತದೆ. ಆದ್ದರಿಂದ ಮನುಷ್ಯ ಜನ್ಮದಲ್ಲಿ ಹುಟ್ಟಿದ ಬ್ರಾಹ್ಮಣ, ಕ್ಷತ್ರಿಯ, ವೈಶ್ಯ ಶೂದ್ರರಿಗೆ ಮಾತ್ರ ಭಾರತದೇಶ ಅಂಗವೆನಿಸುತ್ತದೆ. ಇನ್ನು ನೀಚಜನ್ಮದಲ್ಲಿ ಹುಟ್ಟಿದವರಿಗೆ ಸತ್ಯವಚನ , ಹರಿಸ್ಮರಣೆ ಮುಂತಾದುವು ಧರ್ಮವೆ. ಇವು ಎಲ್ಲಿ ಮಾಡಿದರು ಪುಣ್ಯ ಪ್ರದವೇ 'ಹರಿನಾಮ ನರಕಸ್ಥರನು ಕಾಯಿತು' ಎಂಬ ಶ್ರೀಜಗನ್ನಾಥದಾಸರ ವಾಣಿ ಯುಕ್ತವಾಗುವುದು ಈ ಅಭಿಪ್ರಾಯದಲ್ಲೇ. ಈ ಅಂಶ ಯಾಜ್ಞವಲ್ಕ್ಯದಲ್ಲೂ ಸ್ಪಷ್ಟ .

ಯೋಗೀಶ್ವರಂ ಯಾಜ್ಞವಲ್ಕ್ಯಂ ಸಂಪೂಜ್ಯ ಮುನಯೋಽಬ್ರುವನ್ ।
ವರ್ಣಾಶ್ರಮೇತರಾಣಾಂ ನೋ ಬ್ರೂಹಿ ಧರ್ಮಾನಶೇಷತಃ ॥

ಮಿಥಿಲಾಸ್ಥಃ ಸ ಯೋಗೀಂದ್ರಃ ಕ್ಷಣಂ ಧ್ಯಾತ್ವಾಽಬ್ರವೀತ್ ಮುನೀನ್ ।
ಯಸ್ಮಿನ್ ದೇಶೇ ಮೃಗಃ ಕೃಷ್ಣಃ ತಸ್ಮಿನ್ ಧರ್ಮಾನ್ ನಿಬೋಧತ ॥

ಕೆಲ ಮುನಿಗಳು ಯೋಗೀಶ್ವರರಾದ ಯಾಜ್ಞವಲ್ಕ್ಯರನ್ನು ಪೂಜಿಸಿ ವರ್ಣಾಶ್ರಮ- ಧರ್ಮದ ಬಗ್ಗೆ ಕೇಳಿದರು. ಉತ್ತರ ನೀಡಲು ಉದ್ಯುಕ್ತರಾದ ಯಾಜ್ಞವಲ್ಕ್ಯರು ಯಾವ ದೇಶದಲ್ಲಿ ಕೃಷ್ಣಮೃಗವು ವಾಸಮಾಡುತ್ತದೆಯೋ ಅಂತಹ ಭಾರತ ಎಲ್ಲಾ ವರ್ಣಾಶ್ರಮಾಚಾರಕ್ಕೆ ಆಶ್ರಯವೆಂದು ನುಡಿದರು. ಅನಂತರದಲ್ಲಿ ವರ್ಣಾಶ್ರಮೋಚಿತ ಸಂಸ್ಕಾರವನ್ನೂ ಉಪದೇಶಿಸುತ್ತಾರೆ. ವಸಿಷ್ಠಸ್ಮೃತಿಯಲ್ಲೂ ಹೀಗೆ ಇದೆ.

ಯಾವತ್ಕೃಷ್ಣಮೃಗೋ ವಿಚರತಿ, ತಾವದ್ ಬ್ರಹ್ಮವರ್ಚಸಂ. ಎಲ್ಲಿಯವರೆಗೆ ಕೃಷ್ಣಮೃಗ ಸಂಚರಿಸುತ್ತದೆಯೋ ಅಲ್ಲಿವರೆಗೆ ಬಹ್ಮವರ್ಚಸ್ಸು (ಬ್ರಹ್ಮವರ್ಚಸ್ಸು = ಅಧ್ಯಯನಾದಿ ದ್ವಿಜಧರ್ಮವೆಂದು ವ್ಯಾಖ್ಯಾನವಿದೆ). ವ್ಯಾಸಸ್ಮೃತಿಯಲ್ಲೂ ಹೀಗೆ ಇದೆ.

ವಾರಾಣಸ್ಯಾಂ ಸುಖಾಸೀನಂ ವೇದವ್ಯಾಸಂ ತಪೋನಿಧಿಮ್ ।
ಪಪ್ರಚ್ಛುಃ ಮುನಯೋಽಭ್ಯೇತ್ಯ ಧರ್ಮಾನ್ ವರ್ಣವ್ಯವಸ್ಥಿತಾನ್ ।
ಸ ಪೃಷ್ಟಃ ಸ್ಮೃತಿಮಾನ್ ಸ್ಮೃತ್ವಾ ಸ್ಮೃತಿಂ ವೇದಾರ್ಥಗರ್ಭಿತಾಮ್ ।
ಉವಾಚಾಥ ಪ್ರಸನ್ನಾತ್ಮಾ ಮುನಯಃ ಶ್ರೂಯತಾಮಿತಿ ।
ಯತ್ರ ಯತ್ರ ಸ್ವಭಾವೇನ ಕೃಷ್ಣಸಾರೋ ಮೃಗಃ ಸದಾ ।
ಚರತೇ ತತ್ರ ವೇದೋಕ್ತೋತೀ ಧರ್ಮೋ ಭವಿತುಮರ್ಹತಿ ॥ ಇತಿ ।

ಅರ್ಥ :- ಕಾಶಿ ಕ್ಷೇತ್ರದಲ್ಲಿ ಸುಖಾಸೀನರಾದ ವೇದವ್ಯಾಸರನ್ನು ಮುನಿಗಳು ವರ್ಣ-

ವ್ಯವಸ್ಥೆಯನ್ನು ಹೊಂದಿದ ಧರ್ಮದ ಉಪದೇಶಕ್ಕಾಗಿ ಪ್ರಾರ್ಥಿಸಿದರು. ಎಲ್ಲಿ ಸ್ವಭಾವತಃ ಕೃಷ್ಣಸಾರಮೃಗವು ಸಂಚರಿಸತ್ತದೆಯೋ ಅಲ್ಲಿ ವೇದೋಕ್ತವಾದ ವರ್ಣಾಶ್ರಮ ಧರ್ಮ ಇರಲು ಸಾಧ್ಯ ಎಂದು.

ಹೀಗೆ ಚೆನ್ನಾಗಿ ಆಲೋಚಿಸಿದಾಗ ಎಲ್ಲಿ ಭಾಗವತಾದಿ ಧರ್ಮಪ್ರಸಕ್ತಿಯೋ ಸಾಧಾರಣ ಧರ್ಮಪ್ರಸಕ್ತಿಯೋ, ವೈಯುಕ್ತಿಕ ಧರ್ಮಪ್ರಸಕ್ತಿಯೋ, ವೈಷ್ಣವ ಧರ್ಮಪ್ರಸಕ್ತಿಯೋ, ಅಲ್ಲೆಲ್ಲೂ ದೇಶವಿಚಾರ ಬರದೆ ಎಲ್ಲೆಲ್ಲಿ ವರ್ಣಾಶ್ರಮ ಧರ್ಮವಿಚಾರ ಬರುತ್ತದೋ ಅಲ್ಲಲ್ಲಿ ದೇಶವಿಚಾರ ಬಂದರೆ ದೇಶ (ಭಾರತ)ವು ವರ್ಣಾಶ್ರಮದ ಅಂಗವೆನಿಸುವುದು ಖಚಿತವಾಗುತ್ತದೆ.

ಇದೇ ರೀತಿಯಾಗಿ ಮನುಸ್ಮೃತಿಯಲ್ಲಿ, ಪೈಠೀನಸೀಸ್ಮೃತಿಯಲ್ಲಿ, ಭಾಗವತದಲ್ಲಿ, ಬೋಧಾಯನಧರ್ಮಸೂತ್ರದಲ್ಲಿ ದೇಶಕ್ಕೆ ವರ್ಣಾಶ್ರಮಾಚಾರಾಂಗತ್ವವು ಉದ್ಘೋಷಿತ-ವಾಗಿದೆ. ಈ ರೀತಿಯಾಗಿ ಭಾರತ ಸಮಗ್ರವೂ ಕರ್ಮಣ್ಯವೇ, ಆದರೂ ಕೆಲ ಪ್ರದೇಶಗಳು ಗಮನವಾಸಾದಿಗಳಿಗೆ ನಿಷಿದ್ಧವಾಗಿರುತ್ತದೆ. ಅಲ್ಲಿ ಅಪವಾದಗಳೂ ಉಂಟು. ಹೀಗೆ ಕೆಲ ದೇಶಗಳ ಆಚಾರ ಸ್ವೀಕರಿಸಬಾರದು, ಕೆಲ ದೇಶಗಳಲ್ಲಿ ಯಜ್ಞ ವಿವಾಹ ಶ್ರಾದ್ಧಾದಿಗಳನ್ನು ಮಾಡಬಾರದು. ಮೊದಲಿಗೆ ಇದರ ಅನುಕ್ರಮಣಿಕೆ ಅನಂತರ ಪ್ರಮಾಣಗಳನ್ನು ಕೊಡುತ್ತೇವೆ. ಯಾವುದು ಗಮನಕ್ಕೆ ಅನರ್ಹವೋ ಅದು ಸುತರಾಂ ವಾಸಕ್ಕೆ ದೇಶಾಚಾರಕ್ಕೆ ಶ್ರಾದ್ಧಾದಿಗಳಿಗೆ ನಿಷಿದ್ಧವಾಗುತ್ತದೆ. . ಇಲ್ಲಿ ಈಗಿರುವ ಭಾರತದಲ್ಲಿ ಈ ದೇಶಗಳು ಯಾವ ಹೆಸರಿನಿಂದ ಕರೆಯಲ್ಪಡುತ್ತದೆ ಮತ್ತು ಎಲ್ಲಿ ಇವೆ ಎಂಬುದನ್ನು ವಿಮರ್ಶಿಸಿ ಸಂಗ್ರಹಿಸಿದ್ದೇವೆ.

ಗಮನಾನರ್ಹ

1. ಅಂಗ (ಚಂಪಾಪುರೀ ಮೊದಲಾದ ಬಿಹಾರದಲ್ಲಿರುವ ಅತ್ಯಲ್ಪದೇಶ) 2. ವಂಗ (ವೆಸ್ಟ್ ಬೆಂಗಾಲ್ ಮತ್ತು ಬಾಂಗ್ಲಾದೇಶ) 3. ಕಲಿಂಗ (ವಿಶಾಖಪಟ್ಟಣ ಮೊದಲಾದ ಸಮುದ್ರಪ್ರಾಂತ ಅಲ್ಪದೇಶ) 4. ಸೌರಾಷ್ಟ್ರ (ಸೂರತ್ ಮೊದಲಾದ ಅತ್ಯಲ್ಪದೇಶ) 5. ಮಗಧ (ಕೀಕಟ ಬಿಹಾರದಲ್ಲಿ ಏಕದೇಶ) 6. ಆರಟ್ಟ (ಪಂಜಾಬ್ ಪಾಕಿಸ್ಥಾನದಲ್ಲಿರವುದು) 7. ಕಾರಸ್ಕರ (ವಧ ಮಾಡುವ ಸ್ಥಳವಿಶೇಷ) 8.ಪುಂಡ್ರ (ವೆಸ್ಟ್ ಬೆಂಗಾಲ್‌ನಲ್ಲಿ ಸ್ಥಲವಿಶೇಷ) 9. ಪ್ರಾನೂನ (ಐರಾಕ್ಯ ಜನರಿಂದ ಆಕ್ರಮಿಸಲ್ಪಟ್ಟ ಕಾಶ್ಮೀರ ಪರ್ವತಗಳು) 10. ಸೌವೀರ (ಪಾಕಿಸ್ಥಾನದಲ್ಲಿ ಒಂದು ಸಣ್ಣ ದೇಶ) 11. ಸಿಂಧು (ಸಿಂಧ್‌ಪ್ರಾಂತ ಪಾಕಿಸ್ಥಾನ) 12. ಕೋಂಕಣ (ಪಶ್ಚಿಮಸಮುದ್ರಪ್ರಾಂತದಲ್ಲಿ ಒಂದು ಚಿಕ್ಕದೇಶ)

ಈ ರೀತಿ ಗಮನಾನರ್ಹದೇಶಗಳಲ್ಲಿ ಅಪವಾದಗಳು ಇವೆ. ಅವು ಯಥಾಸಂಖ್ಯವಾಗಿ ಸ್ವೀಕರಿಸಬೇಕು.

ಅಪವಾದಗಳು 1. ಗಂಗಾನದೀ ಇತ್ಯಾದಿ ನದಿಗಳು 2. ಗಂಗಾಸಾಗರಸಂಗಮದೇಶ ಮತ್ತು

ಗಂಗಾನದೀ 3. ಸಿಂಹಾಚಲ ಮೊದಲಾದ ತೀರ್ಥಗಳು 4. ಕಂಡಿಲ್ಲ 5. ಗಯಾ-ಗಂಗಾದಿನದಿ ಚ್ಯವನಾಶ್ರಮ ರಾಜಗೃಹ = (ನಲಂದಾ ಜಿಲ್ಲೆ)ಪುಣ್ಯವನಗಳು 6. ನದೀ ಪ್ರದೇಶಗಳು (ಶತದ್ರು, ವಿಪಾಶ, ಐರಾವತಿ, ಅಸಿಕ್ನಿ, ಚಂದ್ರಭಾಗಾ., ವಿತಸ್ತ, ಸಿಂಧು ಇವು ಅಲ್ಲಿ ಪ್ರವಹಿಸುವ ನದಿಗಳು) 7. ನದೀದೇಶಗಳು (ಅಲ್ಲಿಯೂ ಈವುಗಳಲ್ಲೇ ಕೆಲ ನದಿಗಳು ಹರಿಯುತ್ತವೆ.) 8. ಗಂಗಾತೀರ ದೇಶ 9. ನದೀದೇಶಗಳು 10.ತಿಳಿದಿಲ್ಲ 11. ನದೀದೇಶ.

ಶ್ರಾದ್ಧಾನರ್ಹಾಃ 1.ಅಂಗ 2. ವಂಗ 3.ಕಲಿಂಗ 4.ಸೌರಾಷ್ಟ್ರ 5.ಮಗಧ 6.ಆರಟ್ಟ 7. ಕಾರಸ್ಕರ 8.ಪುಂಡ್ರ 9.ಪ್ರಾನೂನ 10.ಸೌವೀರ 11.ಸಿಂಧು 12.ಕೋಂಕಣ 13.ತ್ರಿಶಂಕು-ದೇಶ (ಮಹಾನದಿಯಿಂದ ಉತ್ತರಕ್ಕೆ ಹನ್ನೆರಡು ಯೋಜನ ಪರಿಮಿತ ದೇಶ)

ದೇಶಾಚಾರಕ್ಕೆ ಅಗ್ರಾಹ್ಯದೇಶಗಳು (ಅಂದರೆ ಕೆಲ ದೇಶದಲ್ಲಿರುವ ದೇಶಸ್ಥರ ಆಚಾರ ಅಗ್ರಾಹ್ಯ) 1. ಅಂಗ 2. ವಂಗ 3.ಕಲಿಂಗ 4. ಸೌರಾಷ್ಟ್ರ 5.ಮಗಧ 6.ಆರಟ್ಟ 7. ಕಾರಸ್ಕರ 8. ಪುಂಡ್ರ 9.ಪ್ರಾನೂನ 10. ಆನರ್ತಕ (ದ್ವಾರಕಾ ಯಾವ ದ್ವೀಪದಲ್ಲಿ ಇದೆಯೋ ಅದು); ಅವಂತಿ (ಉಜ್ಜಯಿನೀ) 11. ದಕ್ಷಿಣಾಪಥ (ಭಾರತದ ಉತ್ತರ ಭಾಗದಿಂದ ದಕ್ಷಿಣಕ್ಕೆ ಬರುವಾಗ ವಿಂಧ್ಯಪರ್ವತದ ಪೂರ್ವಭಾಗದಲ್ಲಿ ಮಾತ್ರ ಮಾರ್ಗವುಂಟು. ಆ ಮಾರ್ಗದ ಕೆಲ-(ಅತ್ಯಲ್ಪ)ದೇಶಗಳು ಎಂದರ್ಥ.[1] 12. ಉಪಾವೃತ್ (ಅಂತ್ಯಜಾತಿಯ ಕೆಲ ಜನರು ಎಲ್ಲಿ ವಾಸ ಮಾಡುತ್ತಾರೊ ಅಂತಹ ಯಾವುದೋ ಒಂದು ದೇಶ) 13. ಸಿಂಧು 14. ಸೌವೀರ (ಶತದ್ರು ಮೊದಲಾದ ಪಂಚನದಿಗಳ ಸಂಗಮಸ್ಥಲ ದೇಶ) 15.ಕಾಂಚೀ 16. ಕೋಸಲ 17.ಕರ್ಣಾಟ (ಪಾಕಿಸ್ಥಾನದಲ್ಲಿ ಶಿಬಿದೇಶ ಸಮೀಪ) 18.ಕಚ್ಛಜ (ಗುಜರಾತ್ ಸಮುದ್ರದಲ್ಲಿ-ರುವ ದ್ವೀಪ) 19. ಕಾವೇರೀ (ಅಭಿಜನರು ಸಂಕೇತಿ ಪ್ರಭೃತಿಗಳು) 20.ಕೊಲ್ವಣ (ತ್ರಯಂಬಕ ಗಿರಿಯ ಮಧ್ಯದೇಶ ಮಹಾರಾಷ್ಟ್ರ)

ವಾಸಾನರ್ಹ - 1. ಅಂಗ 2. ವಂಗ 3. ಕಲಿಂಗ 4.ಸೌರಾಷ್ಟ್ರ 5.ಮಗಧ 6.ಆರಟ್ಟ 7. ಕಾರಸ್ಕರ 8. ಪುಂಡ್ರ 9. ಪ್ರಾನೂನ 10. ಸೌವೀರ 11. ಸಿಂಧು 12. ಕೋಂಕಣ 13. ಆಂಧ್ರ (ಕೃಷ್ಣಾತೀರದಿಂದ ಸ್ವಲ್ಪದೂರದಲ್ಲಿರುವ ಸಮುದ್ರ ಪ್ರಾಂತದೇಶ)14.ಮಾಲವಿಕ (ಉದಯಪುರ ಮೊದಲಾದ ರಾಜಸ್ಥಾನದಲ್ಲಿ ಚಿಕ್ಕದೇಶ)15. ವೈಂಧ್ಯ = ವಿಂಧ್ಯ ದೇಶದ ಒಂದು ಭಾಗ 16. ಖಶ (ಕಾಶ್ಮೀರ ಪರ್ವತಪ್ರಾಂತಗಳು)

ವಿವಾಹಾನರ್ಹಗಳು 1. ಅಂಗ 2. ವಂಗ 3. ಕಲಿಂಗ 4. ಸೌರಾಷ್ಟ್ರ 5. ಮಗಧ 6.ಆರಟ್ಟ 7. ಕಾರಸ್ಕರ 8. ಪುಂಡ್ರ 9. ಪ್ರಾನೂನ 10. ಸೌವೀರ 11. ಸಿಂಧು 12.ಕೋಂಕಣ 13. ಆಂಧ್ರ 14. ಮಾಲವಿಕ 15. ವೈಂಧ್ಯ

---

೧. ಇದರ ಹೆಚ್ಚಿನ ವಿವರಣೆ ಸಂಸ್ಕೃತಗ್ರಂಥದಲ್ಲಿ ಸ್ಪಷ್ಟ.

ಯಜ್ಞಾನರ್ಹಗಳು -1. ಅಂಗ 2. ವಂಗ 3. ಕಲಿಂಗ 4. ಸೌರಾಷ್ಟ್ರ 5. ಮಗಧ 6. ಆರಟ್ಟ 7. ಕಾರಸ್ಕರ 8. ಪುಂಡ್ರ 9. ಪ್ರಾನೂನ 10. ಸೌವೀರ 11. ಸಿಂಧು 12. ಕೋಂಕಣ 13. ಆಂಧ್ರ 14. ಮಾಲವಿಕ 15. ವೈಂಧ್ಯ.

ಲಂಘನಾನರ್ಹ-1. ಕರ್ಮದಾ (ನರ್ಮದಾನದಿಯಲ್ಲಿ ದಕ್ಷಿಣಾಪಥದ ಹತ್ತಿರ ದಾಟ-ಬಾರದು ಬೇರೆ ಕಡೆ ನರ್ಮದಾಪ್ರದಕ್ಷಿಣೆ ವಿಹಿತವಾದದ್ದರಿಂದ) 2. ಸಿಂಧುಪಾರ 3. ಕರತೋಯಾ (ನದೀ ಬಾಂಗ್ಲಾದೇಶದಲ್ಲಿ) 4. ಕೌಶೀ (ಬಾಂಗ್ಲಾ ಮತ್ತು ಭಾರತದಲ್ಲಿ ಹರಿಯುವ ನದೀ)ಪದ್ಮ ಪಶ್ಚಿಮ ಪಾರ (ಪುಷ್ಕರಕ್ಷೇತ್ರದ ಪಶ್ಚಿಮಭಾಗ).

ಅಂಗವಂಗಾದಯೋದೇಶಾಃ ಷಟ್‌ಪಂಚಾಶತ್ಕ ವೇದಕಾಃ ।
ಕದಾಚಿತ್ಪುಣ್ಯದೇಶಾ ಸ್ಯುಃ ಮಹತಾಂ ಸನ್ನಿವೇಶತಃ ॥
ಕದಾಚಿತ್ತದಭಾವೇನ ಸ್ಯುಃ ಸ್ತೇ ಪಾಪವಿಶೇಷಣಾಃ ।
ದೇವದೇಶವಿಶೇಷಾಶ್ಚ ಧೇನ್ವಾವಾಸ ನಿವೇಷಣೈಃ ॥
ಪುನಃ ಶುದ್ಧಾಃ ಭವಂತ್ಯೇವ ತಥಾ ಮಂತ್ರೋಕ್ಷಣೇನ ಚ ।

ತಾತ್ಪರ್ಯಾರ್ಥ – ಮಹಜ್ಜನ ಒಬ್ಬ ಇದ್ದಾಗಲೂ ಅದು ಪುಣ್ಯದೇಶ. ಅಸಜ್ಜನ ಒಬ್ಬನಿದ್ದರೂ ಅದು ಪಾಪದೇಶ. ಅಂಗವಂಗಾದಿದೇಶಗಳು ಒಮ್ಮೆ ಪುಣ್ಯದೇಶವಾಗಿದ್ದವು. ಅಲ್ಲಿ ಮಹಜ್ಜನರು ಹಿಂದೆ ಇದ್ದರು. ಆಮೇಲೆ ಇವು ಅಸಜ್ಜನರ ವಾಸದಿಂದ ಪಾಪದೇಶಗಳಾದವು. ಇಲ್ಲಿ ಸಾತ್ವಿಕರು ವಿಷ್ಣುಲಿಂಗ, ಹಸುಗಳು ಮೊದಲಾದ ಪವಿತ್ರದಾಯಕ ಪದಾರ್ಥಗಳಿಂದ ಶುದ್ಧೀಕರಿಸಿಕೊಂಡು ಹೋಗಬಹುದು.

ಇಲ್ಲಿ ದೇಶಾಚಾರಾದ್ಯಗ್ರಹದಲ್ಲಿ ನಿಮಿತ್ತಗಳು ಖಿಲಾಧ್ಯುಷಿತತ್ವ, ಸ್ತ್ರೀಯರಲ್ಲಿ ಕಲ್ಯಾಣಾ-ಚಾರಾದಿಗಳು ಇಲ್ಲದಿರುವಿಕೆ, ಸ್ತ್ರೀಯರಲ್ಲಿ ಅನಿಯಮ, ಶೂದ್ರ ಜನಾಕ್ರಾಂತತೆ, ಅಧಾರ್ಮಿಕ ಜನಾವೃತತ್ವ ಮ್ಲೇಚ್ಛಾವೃತತ್ವ ಇವೇ ಮೊದಲಾದುವು. ಎಲ್ಲಿ ವಂಗದೇಶಕ್ಕೆ ಪ್ರತ್ಯಕ್ಷವಾಗಿ ಹೋಗಲು ನಿಷೇಧವಿದೆಯೋ ಅಲ್ಲಿ ತೀರ್ಥಯಾತ್ರೆ ಬಿಟ್ಟು ಹೋಗಬಾರದು, ವಾಸಿಸಲೂ ಬಾರದು (ಅಂದರೆ ತೀರ್ಥಯಾತ್ರೆಗೆ ಹೋಗಬೇಕಾದರೆ ನಿಷಿದ್ಧ ಅಂಗಾದಿ ದೇಶಕ್ಕೆ ಹೋಗಲೇ ಬೇಕಾದರೆ ಆಗ ನಿಷಿದ್ಧದೇಶಕ್ಕೆ ಹೋದದ್ದಕ್ಕಾಗಿ ಪಾಪ ಬರುವುದಿಲ್ಲ ಮತ್ತು ಅಲ್ಲಿ ಮಾಡಿದ ಕರ್ಮಾನುಷ್ಠಾನ ಸಫಲವಾಗುತ್ತದೆ ಎಂದರ್ಥ). ಎಲ್ಲಿ ಅಯೋಗ್ಯ ಜನರು ವಾಸಿಸಿ ಭಾರತವನ್ನು ಅಪವಿತ್ರವನ್ನಾಗಿಸುತ್ತಾರೋ ಅಂತಹ ಸ್ಥಳದಲ್ಲಿ ಚಕ್ರಾಂಕಾದಿಗಳಿಂದ ಶೋಧಿಸಲು ಸಂಭವವಿದೆಯಾದ್ದರಿಂದ ಗಮನಕ್ಕೆ ವಾಸಕ್ಕೆ ಅದು ಅರ್ಹವಾಗುತ್ತದೆ, ಈ ಅಭಿಪ್ರಾಯವನ್ನೇ ಕೃಷ್ಣಾಮೃತಮಹಾರ್ಣವದಲ್ಲಿ 'ಮ್ಲೇಚ್ಛದೇಶೇ ಅಶುಚೌ ವಾಪಿ' ಎಂಬ ಶ್ಲೋಕದಲ್ಲಿ ಶ್ರೀ ಮದಾಚಾರ್ಯರು ಹೇಳಿದ್ದಾರೆ ಎಂದು ತಿಳಿಯಬೇಕು. ಹೀಗೆ ಭಾರತದಲ್ಲಿ ತೀರ್ಥಯಾತ್ರೆಯಲ್ಲಿ

ಎಲ್ಲರಿಗೂ ಗಮನಕ್ಕೆ, ಆಪತ್ತಿನಲ್ಲಿ ಗೃಹಸ್ಥನಿಗೆ ಹಾಗೂ ಶೂದ್ರನಿಗೆ ಆಪತ್ತಿಲ್ಲದಿರುವಾಗಲೂ ಗಮನವಾಸಗಳಿಗೆ ಅವಕಾಶವಿರುತ್ತದೆ.

ಚಾತುರ್ಮಾಸ್ಯದಲ್ಲಿ ದ್ವಿದಳವ್ರತದಲ್ಲಿ ಹುಣಸೆಹಣ್ಣು ನಿಷೇಧಿಸಿದಾಗ ಆ ಕಾಲ ನಿಮಿತ್ತವಾಗಿ ಅದನ್ನು ನಿಷೇಧಿಸಿದ್ದರಿಂದ ಆ ನಿಮಿತ್ತ ಅಂದರೆ ವ್ರತಕಾಲವಿಲ್ಲದಾಗ ಹುಣಸೆಹಣ್ಣು ಹೇಗೆ ಗ್ರಾಹ್ಯವೋ ಹಾಗೆ ಭಾರತದಲ್ಲಿ ಇರುವ ದೇಶಗಳ ನಿಷೇಧ. ಏಕೆಂದರೆ ತೀರ್ಥಯಾತ್ರಾಕಾಲದಲ್ಲಿ ನಿಷಿದ್ಧಭಾರತದ ಕೆಲದೇಶದಲ್ಲಿ ಮಾಡಿದ ಕರ್ಮಾನುಷ್ಠಾನ ಫಲಪ್ರದವಾಗಿದೆ. ಒಂದು ವೇಳೆ ಭಾರತದ ಕೆಲವು ದೇಶಗಳು ಸ್ವಾಭಾವಿಕ ನಿಷಿದ್ಧವಾಗಿದ್ದರೆ ಅಲ್ಲಿ ಕರ್ಮಾನುಷ್ಠಾನವೂ ನಿಷಿದ್ಧವಾಗಬೇಕಾಗುತ್ತಿತ್ತು. ಈರುಳ್ಳಿ ತಿನ್ನಬಾರದು 'ನ ಪಲಾಂಡುಂ ಭಕ್ಷಯೇತ್' ಎಂಬ ನಿರ್ನಿಮಿತ್ತನಿಷೇಧ 'ಯಾವಾಗಲೂ ಈರುಳ್ಳಿ ತಿನ್ನಬಾರದು' ಎಂಬ ಸ್ವಾಭಾವಿಕ ನಿಷೇಧದಂತೆ ಮ್ಲೇಚ್ಛದೇಶಗಮನ. ಅಲ್ಲಿ ತೀರ್ಥಯಾತ್ರೆ ಅಸಂಭಾವಿತ. ಈ ಅಂಶವನ್ನು ಸ್ಕಾಂದಪುರಾಣದಲ್ಲಿ ನೋಡಬಹುದು.

ಅಂಗವಂಗಕಲಿಂಗಾಶ್ಚ ಪರ್ವತಾಶ್ಚ ಖಶಾಂಸ್ತಥಾ ।
ಸಿಂಧುಸೌವೀರ ಸೌರಾಷ್ಟ್ರಾನ್ ಪಾರದಾನಾಂಧ್ರಮಾಲವಾನ್
ವಿವಾಹನೇ ದ್ವಿಜೋ ನಿತ್ಯಮನಾಪದಿ ವಿವರ್ಜಯೇತ್
ಏತಾನಪ್ಯಾಪದಿ ಗೃಹೀ ಸಂಶ್ರಯೇದ್ವೃತ್ತಿಕರ್ಷಿತಃ ॥

ಅರ್ಥ :- ಅಂಗ, ವಂಗ, ಕಲಿಂಗ ಪರ್ವತ (ಕಾಶ್ಮೀರದ ಒಂದು ಏಕದೇಶ)ಖಶ ಸಿಂಧು ಸೌವೀರ ಸೌರಾಷ್ಟ್ರ ಪಾರದ ಆಂಧ್ರಮಾಲವಾದಿ ದೇಶಗಳಲ್ಲಿ ವಿವಾಹಾದಿ ಕರ್ಮಗಳನ್ನು ಮಾಡಲೇಬಾರದು ಆಪತ್ತಿಲ್ಲದಿದ್ದಾಗ ವಾಸಿಸಲೂಬಾರದು. ಒಂದು ವೇಳೆ ಆಪತ್ತು ಇದ್ದರೆ ಗೃಹಸ್ಥನಾದ ದ್ವಿಜನು ಈ ದೇಶಗಳನ್ನು ಆಶ್ರಯಿಸಬಹುದು ವಾಸಿಸಲೂ ಬಹುದು.

ಇಲ್ಲಿ ಪೂರ್ವೋಕ್ತ ವಿಷಯಾನುಕ್ರಮಣಿಕೆಗೆ ಪ್ರಮಾಣಸಂಗ್ರಹವಿದೆ.

ದೇಶಾಚಾರಕ್ಕೆ ಅಗ್ರಾಹ್ಯ..ಅವಂತಯೋ (ಆನರ್ತಕಾ)ऽಂಗಮಗಧಾಃ ಸುರಾಷ್ಟ್ರಾ
ದಕ್ಷಿಣಾಪಥಾಃ. ಉಪಾವೃತ್ ಸಿಂಧುಸೌವೀರಾಃ ಏತೇ ಸಂಕೀರ್ಣಯೋನಯಃ ॥

(ಬೋಧಾಯನ ಧರ್ಮಸೂತ್ರ ದ್ವಿತೀಯಕಾಂಡ 14ನೇ ಸೂತ್ರ)

ಗಮನಕ್ಕೆ ನಿಷಿದ್ಧವಾದ ದೇಶಗಳು : ಆರಟ್ಟಾನ್, ಕಾರಸ್ಕರಾನ್, ಪುಂಡ್ರಾನ್, ಸೌವೀರಾನ್, ವಂಗಾನ್, ಕಲಿಂಗಾನ್, ಪ್ರಾನೂನಾನ್ ಇತಿ ಚ ಗತ್ವಾ ಪುನಸ್ತೋಮೇನ ಯಜೇತ ಸರ್ವ-ಪೃಷ್ಠಯಾ ವಾ (15-2-ಬೋಧಾಯನ)

ಆದಿಪುರಾಣ-

ಆರಟ್ಟಾ ನಾಮ ತೇ ದೇಶಾಃ ನ ತೇಷ್ವಾರ್ಯೋऽನ್ವಹಂ ವಸೇತ್ ।

ಪದ್ಭ್ಯಾಂ ಸ ಕುರುತೇ ಪಾಪಂ ಯಃ ಕಲಿಂಗಾನ್ ಪ್ರಪದ್ಯತೇ ।
ಋಷಯೋ ನಿಷ್ಕೃತಿಂ ತಸ್ಯ ಪ್ರಾಹುಃ ವೈಶ್ವಾನರಂ ಹವಿಃ ॥

ಅರ್ಥ :- ಆರಟ್ಟದೇಶದಲ್ಲಿ ಒಂದು ದಿವಸವೂ ಇರಬಾರದು. ಕಲಿಂಗ ದೇಶಕ್ಕೆ ಕಾಲಿಡಬಾರದು. ತೀರ್ಥಯಾತ್ರೆಗೆ ಹೋಗುವುದು ನಿಷಿದ್ಧವಲ್ಲ

ಅಂಗವಂಗಕಲಿಂಗೇಷು ಸೌರಾಷ್ಟ್ರ ಮಗಧೇಷು ಚ ।
ತೀರ್ಥಯಾತ್ರಾಂ ವಿನಾ ಗಚ್ಛನ್ ಪುನಃ ಸಂಸ್ಕಾರಮರ್ಹತಿ ॥

ಅಂಗ ವಂಗಕಲಿಂಗಸೌರಾಷ್ಟ್ರ ಮಗಧ ಇವೇ ಮೊದಲಾದ ದೇಶಗಳಿಗೆ ತೀರ್ಥಯಾತ್ರೆ ಬಿಟ್ಟು ಬೇರೆ ಕಾಲದಲ್ಲಿ ಹೋದರೆ ಪುನಃ ಸಂಸ್ಕಾರ ಮಾಡಿಕೊಳ್ಳಬೇಕು.

ಲಂಘನ ಮಾಡಬಾರದ ದೇಶ -

'ಆರ್ಯಾವರ್ತಮತಿಕ್ರಮ್ಯ ದ್ವಿಜೋ ವಾ ಯದಿ ವಾಽದ್ವಿಜಃ । ಕರ್ಮದಾಂ ಸಿಂಧುಪಾರಂ ಚ ಕರತೋಯಾಂ ನ ಲಂಘಯೇತ್ ॥' ಆರ್ಯಾವರ್ತದೇಶದಲ್ಲಿ(ಭಾರತದಲ್ಲಿ) ಹುಟ್ಟಿದ ದ್ವಿಜನು ಅದ್ವಿಜನು ಸಿಂಧುಪಾರವನ್ನು ಮತ್ತು ಕರತೋಯವನ್ನು ದಾಟಬಾರದು.

ಗಮನವಾಸಾದಿನಿಷೇಧಕ್ಕೆ ಅಪವಾದ -

ಕೀಕಟೇಷು ಗಯಾ ಪುಣ್ಯಾ ನದೀ ಪುಣ್ಯಾ ಪುನಃ ಪುನಃ ।
ಚ್ಯವನಸ್ಯಾಶ್ರಮಃ ಪುಣ್ಯಃ ಪುಣ್ಯಂ ರಾಜಗೃಹಂ ವನಮ್ ॥

ಕೀಕಟದೇಶದಲ್ಲಿ ಗಯಾ ಪುಣ್ಯಭೂಮಿ ಗಂಗಾನದೀ ಸರ್ವತ್ರ ಪುಣ್ಯವೇ. ಚ್ಯವನಾಶ್ರಮ ಮತ್ತು ರಾಜಗೃಹ(ನಲಂದಾ)ಮತ್ತು ವನವು (ನೈಮಿಷಾರಣ್ಯದಂತೆ)ಪುಣ್ಯಸ್ಥಲ.

ಶ್ರಾದ್ಧಾನರ್ಹದೇಶಗಳು ವಾಯುಪುರಾಣೇ -

ತ್ರಿಶಂಖೋರ್ವರ್ಜಯೇದ್ದೇಶಂ ಸರ್ವಂ ದ್ವಾದಶಯೋಜನಮ್ ।
ಉತ್ತರೇಣ ಮಹಾನದ್ಯಾಃ ದಕ್ಷಿಣೇನ ಚ ಕೀಕಟಾನ್ ।
ದೇಶಃ ತ್ರೈಶಂಖವೋ ನಾಮ ಶ್ರಾದ್ಧಕರ್ಮಣಿ ಗರ್ಹಿತಃ ॥

ಆಚಾರ ಸ್ವೀಕರಿಸಬಾರದ ದೇಶಗಳು.-

ಕಾಂಚಿ ಕೋಸಲ ಸೌರಾಷ್ಟ್ರದೇಶಾಃ ಕರ್ಣಾಟಕಚ್ಛಜಾಃ ।
ಕಾವೇರೀ ಕೋಲ್ವಣೋದ್ಭೂತಾಃ ತೇ ಜನಾಃ ನಿಂದಿತಾಃ ಭೃಶಮ್ ॥

ಲಂಘನಮಾಡಬಾರದ ದೇಶಗಳು -

ನರ್ಮದಾಸಿಂಧುಕೌಶೀನಾಂ ಪಾರಂ ಪದ್ಮಸ್ಯ ಪಶ್ಚಿಮಮ್ ।
ಗತ್ವಾ ನರಕಮಾಪ್ನೋತಿ ತೀರ್ಥಕಾಲಾದಿಕಂ ವಸನ್ ॥

ನರ್ಮದಾ ಸಿಂಧು ಕೌಶೀ ನದಿಗಳನ್ನು ಮತ್ತು ಪುಷ್ಕರಕ್ಷೇತ್ರದ ಪಶ್ಚಿಮಭಾಗವನ್ನು ದಾಟಬಾರದು.

ವಿವಾಹ ಯಜ್ಞಶ್ರಾದ್ಧಾದಿಗಳಿಗೆ ನಿಷಿದ್ಧದೇಶಗಳು –

ಅಂಗವಂಗ ಕಲಿಂಗಾಂಧ್ರ ಮದ್ರಮಾಲವಿಕಾಸ್ತಥಾ ।
ನರ್ಮದಾದಕ್ಷಿಣೇ ಯಚ್ಚ ಸಿಂಧೋರುತ್ತರ ಏವ ಚ ।
ಪೌಂಡ್ರಶ್ಚೈವ ಸುರಾಷ್ಟ್ರಶ್ಚ ವೈಂಧ್ಯಮಾಗಧಕಾಃ ಖಶಾಃ ।
ನ ವಿವಾಹಾಂ ತಥಾ ಶ್ರಾದ್ಧಂ ಯಜ್ಞಂ ತೇಷು ಸಮಾಚರೇತ್ ।
ಪಾಪದೇಶಾಶ್ಚ ಯೇ ಕೇಚಿತ್ ವ್ಯಾಧ್ಯೈರಧ್ಯುಷಿತಾಃ ಜನೈಃ ।
ಗತ್ವಾ ದೇಶಾನಪುಣ್ಯಾನ್ ತು ಕೃಚ್ಛ್ರಂ ಪಾಪಂ ಸಮಶ್ನುತೇ ॥

ಅಂಗ, ವಂಗ, ಕಲಿಂಗ, ಆಂಧ್ರ, ಮದ್ರ, ಮಾಲವಿಕ, ನರ್ಮದಾದಕ್ಷಿಣ (ದಕ್ಷಿಣಾಪಥದ ಹತ್ತಿರ), ಸಿಂಧುವಿನ ಉತ್ತರ, ಪೌಂಡ್ರ, ಸುರಾಷ್ಟ್ರ, ವೈಂಧ್ಯ (ವಿಂಧ್ಯ ಪರ್ವತದ ಏಕದೇಶ), ಮಗಧ, ಖಶ ಇವುಗಳಲ್ಲಿ ವಿವಾಹ ಯಜ್ಞ ಶ್ರಾದ್ಧ, ಮುಂತಾದ ಕರ್ಮಾನುಷ್ಠಾನ ಮಾಡಬಾರದು. ಇನ್ನು ವ್ಯಾಧಾದಿ ನೀಚಯೋನಿಗಳಿಂದ ವಾಸಮಾಡಲ್ಪಟ್ಟ ಪಾಪದೇಶಗಳಿಗೆ ಹೋದರೂ ಮಾಹಾಪಾಪ ಬರುತ್ತದೆ. ಇದು ಕೃಷ್ಣಸಾರಮೃಗವಿಲ್ಲದ ದೇಶಗಳು ಎಂದು ಸ್ಮೃತಿಚಂದ್ರಿಕಾಕಾರರು ಹೇಳುತ್ತಾರೆ.

ಪಾಪದೇಶಗಳು ಎರಡುವಿಧ. 1. ಪಾಪಿಷ್ಠರು ಯೋಗ್ಯದೇಶಕ್ಕೆ ಆಕ್ರಮಿಸಿ ಇದ್ದಾಗಲೂ ಅದು ಅಗ್ರಾಹ್ಯ. 2. ಪಾಪಿಷ್ಠರದೇ ಆದ ಹೂಣಾದಿ ದೇಶಗಳು. ಇವೂ ವರ್ಜ್ಯ. ಇಲ್ಲಿ ಮೊದಲನೆಯದು (ಮ್ಲೇಚ್ಛರಿಂದ ಆಕ್ರಮಣ)ಕಾಶೀ ಮುಂತಾದ ಕ್ಷೇತ್ರಗಳೂ ಆಗಬಹುದು. ಕ್ಷೇತ್ರವಲ್ಲದ ಭಾರತಭಾಗವೂ ಆಗಬಹುದು. ಗಂಗಾನದಿಯ ಮಧ್ಯಭಾಗದಲ್ಲಿ ಶೂದ್ರರಾಜ್ಯ-ವಿದ್ದರೂ ಅಲ್ಲಿ ವಾಸಮಾಡಬಹುದು. ಅದು ಬಹಳ ಪುಣ್ಯಕರದೇಶ. ಇದಕ್ಕೆ ಪ್ರಮಾಣ –

ಶೂದ್ರರಾಜ್ಯೇಽಪಿ ನಿವಸೇತ್ ಯತ್ರ ಮಧ್ಯೇ ತು ಜಾಹ್ನವೀ ।
ಸೋಽಪಿ ಪುಣ್ಯತಮೋ ದೇಶಃಽನಾರ್ಯ್ಯೈರಪಿ ಸಮಾಶ್ರಿತಃ ॥

ಎಂದು. ಇನ್ನು ಕ್ಷೇತ್ರವಲ್ಲದ ಭಾರತದಲ್ಲಿ ಶೂದ್ರಾದಿಗಳು ಆಕ್ರಮಿಸಿದರೆ ಹೋಗಬಾರದೆಂದು ವ್ಯಾಸರು ಹೇಳುತ್ತಾರೆ -

ದೇಶಾನ್ ಶೂದ್ರಜನಾಕ್ರಾಂತಾನ್ ಅಧಾರ್ಮಿಕಜನಾವೃತಾನ್ ।
ಮ್ಲೇಚ್ಛಾವೃತಾನ್ ಪ್ರಯತ್ನೇನ ವರ್ಜಯೇದ್ಧಾರ್ಮಿಕೋ ದ್ವಿಜಃ ॥

ಶೂದ್ರಜನರು ಆಕ್ರಮಿಸಿರುವ ಮ್ಲೇಚ್ಛರು ಆಕ್ರಮಿಸಿರುವ ಅಧಾರ್ಮಿಕಜನರಿಂದ ಆಕ್ರಮಿಸಲ್ಪಟ್ಟ ದೇಶವನ್ನು ಬಿಡಬೇಕು ಎಂದು. ಇಲ್ಲಿ (ಅಂದರೇ ಕ್ಷೇತ್ರವಲ್ಲದ ಶೂದ್ರಾದಿ ಜನಾಕ್ರಾಂತ)ಅಪವಾದವನ್ನು ಆಚಾರ್ಯರು ಹೇಳಿದ್ದಾರೆ.

ಕೃಷ್ಣಾಮೃತಮಹಾರ್ಣವ –
ಮ್ಲೇಚ್ಛದೇಶೇಽಶುಚೌ ವಾಽಪಿ ಚಕ್ರಾಂಕೋ ಯತ್ರ ತಿಷ್ಠತಿ ।
ಯೋಜನಾನಿ ತಥಾ ತ್ರೀಣಿ ಮಮ ಕ್ಷೇತ್ರಂ ವಸುಂಧರೇ ॥
ಶಾಲಗ್ರಾಮೋದ್ಭವೋ ದೇವಃ ಶೈಲಂ ಚಕ್ರಾಂಕಮಂಡಿತಮ್ ।
ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ॥ (107/108)

ಇಲ್ಲಿ ತಿಳಿಯಬೇಕಾದ ಸ್ವಾರಸಿಕಾರ್ಥವೇನೆಂದರೆ, ಮ್ಲೇಚ್ಛಾವೃತ ದೇಶವಾಗಲಿ ಇನ್ನು ಬೇರೆಕ್ರಮದಿಂದ ಅಶುಚಿ ದೇಶವಾಗಲಿ ಅಲ್ಲಿ ಚಕ್ರಾಂಕವಿದ್ದರೆ ಅಲ್ಲಿಂದ ಮೂರು ಯೋಜನ ವೈಷ್ಣವ ಕ್ಷೇತ್ರವೇ ಎಂದು ಇಲ್ಲಿ ಕೆಲವರು ಈ ರೀತಿಯಾಗಿ ಕುಚೋದ್ಯ ಮಾಡುತ್ತಾರೆ. ''ಮ್ಲೇಚ್ಛದೇಶವಾದ ಜಪಾನ್ ಅಮೇರಿಕಾದಿ ದೇಶಗಳಿಗೂ ಚಕ್ರಾಂಕವನ್ನು ತೆಗೆದುಕೊಂಡು ಹೋಗಬಹುದು. ಹೋದರೆ ತಪ್ಪಿಲ್ಲ ಎಂಬುದು ಶ್ರೀಮದಾಚಾರ್ಯರ ಅಭಿಪ್ರಾಯ'' ಎಂದು. ಇದು ಒಂದು ಕುಕಲ್ಪನೆ. ಏಕೆಂದರೆ ಶ್ರೀಮದಾಚಾರ್ಯರ ಭಾವ ಇವರಿಗೆ ತಿಳಿದಿಲ್ಲ. ನಮ್ಮ ಆಚಾರ್ಯರೇ ಏಕಾದಶಸ್ಕಂಧದಲ್ಲಿ ದೇಶದ ಕರ್ಮಣ್ಯತ್ವನಿಶ್ಚಯಪ್ರಸಂಗದಲ್ಲಿ ಸೌವೀರ, ಅಸಂಸ್ಕೃತ, ಈರಣ, ಕೀಕಟಗಳಲ್ಲಿ ಅಕರ್ಮಣ್ಯತ್ವ ಹೇಳಿ ಕೀಕಟಮಾತ್ರದಲ್ಲಿ ಕೃಷ್ಣಸಾರಮೃಗ-ವಾಸವಿದ್ದರೆ ಅಪವಾದ (ಅಂದರೆ ಕರ್ಮಣ್ಯತ್ವ)ಹೇಳಿ ಅನಂತರ ಕೃಷ್ಣಸಾರವಿದ್ದರೂ ಖಲರಿದ್ದರೆ ಅಕರ್ಮಣ್ಯವೆಂದು ಖಲರಿದ್ದರೂ ವಿಷ್ಣುಲಿಂಗ (ಸಾಲಗ್ರಾಮಾದಿ)ಅಥವಾ ಸಾತ್ವಿಕರು ಇದ್ದರೆ ಅದು ಗ್ರಾಹ್ಯವೇ ಎಂದು ಹೇಳಿದ್ದಾರೆ. ಒಂದು ವೇಳೆ ಸಾಲಿಗ್ರಾಮವನ್ನು ಅಥವಾ ಚಕ್ರಾಂಕವನ್ನು ಒಯ್ಯುವುದರಿಂದಲೇ ಎಲ್ಲಾ ಸ್ಥಳವೂ ಕರ್ಮಣ್ಯವಾಗುವುದಾದರೆ ಕೀಕಟದಲ್ಲಿ ಮಾತ್ರ ಅಪವಾದಹೇಳುವ ಕಾರಣವಿಲ್ಲ. ಸೌವೀರಾದಿಗಳಿಗೂ ಚಕ್ರಾಂಕದಿಂದ ಶುದ್ಧಿ ಬರುತ್ತಿರುವಾಗ ಕೀಕಟಮಾತ್ರಕ್ಕೆ ಶುದ್ಧಿಹೇಳುವುದು ಮೌಢ್ಯವಾದೀತು. ಮತ್ತು ಕರ್ಮಣ್ಯಾಕರ್ಮಣ್ಯವಿಭಾಗ ವ್ಯರ್ಥವಾದೀತು. ಆದ್ದರಿಂದ ಸಾಲಿಗ್ರಾಮ ಚಕ್ರಾಂಕಗಳ ಮಹಿಮೆ ಇಲ್ಲಿ ಪ್ರಸ್ತುತವೇ ಹೊರತು ಅಲ್ಲೆಲ್ಲಾ ಕರ್ಮಣ್ಯತ್ವ ಪ್ರಸಕ್ತಿ ಇಲ್ಲ.

ಹೋಗಲಿ ಬಿಡಿ ಯಥಾಶ್ರುತದಂತೆ ಎಲ್ಲಾ ರೀತಿಯ ಮ್ಲೇಚ್ಛದೇಶಕ್ಕೂ ಚಕ್ರಾಂಕ ಒಯ್ದರೆ ಮೂರು ಯೋಜನ ಸ್ಥಳ ಕರ್ಮಣ್ಯವೇ ಎಂದು ಸ್ವೀಕರಿಸೋಣ ಆಗ ಅಶುಚಿಕ್ಷೇತ್ರವಾದ ಸ್ಮಶಾನ ಮತ್ತು ಶೌಚಕೂಪವೂ ಚಕ್ರಾಂಕದ ಮೂರು ಯೋಜನದಲ್ಲೇ ಇರುವುದರಿಂದ ಅಲ್ಲೂ ಪೂಜಾದಿಕರ್ಮಾನುಷ್ಠಾನ ಮಾಡಬಹುದು ದೋಷವಿಲ್ಲ ಎಂಬ ಆಪತ್ತಿ ಬರುತ್ತದೆ. ಅಮೇಧ್ಯಗಳಿಗೆ ಮೇಧ್ಯತ್ವ ಬರಬೇಕಾಗುತ್ತದೆ. ಈ ರೀತಿಯಾಗಿ ಬಹುದೋಷಗಳು ಬರುತ್ತವೆ. ಆದ್ದರಿಂದ ಚಕ್ರಾಂಕ ಒಯ್ಯುವುದರಿಂದ ಬರುವ ಶುದ್ಧಿ ಅಲ್ಲಿ ಸರ್ವಕಾರ್ಯಾರ್ಹತ್ವ ಸಾಧಕವಾಗಲಾರದು. ಆದ್ದರಿಂದ ಪ್ರಮಾಣಾಂತರವನ್ನು ಅನುಸರಿಸಿ ಯಥಾಯೋಗ್ಯವಾಗಿ ಕೆಲ ಕಾರ್ಯಾರ್ಹತ್ವ ಹೇಳಬೇಕು. ಮ್ಲೇಚ್ಛದೇಶವೂ ಅಶುದ್ಧವಾದ್ದರಿಂದ ಅಶುಚಿಪದದಿಂದಲೇ

ಮ್ಲೇಚ್ಛದೇಶವನ್ನು ಗ್ರಹಿಸಲು ಬರುತ್ತಿರಲು ಮ್ಲೇಚ್ಛಪದವು ವ್ಯರ್ಥವಾದೀತು. ಅಶುಚಿಯಲ್ಲದ ಮ್ಲೇಚ್ಛದೇಶವೇ ಇಲ್ಲವಾದ್ದರಿಂದ ಅಶುಚಿಪದ ವಿಶೇಷಣವಾದಾಗಲೂ ವ್ಯರ್ಥವೇ. ಅದಕ್ಕಾಗಿ ಮ್ಲೇಚ್ಛದೇಶವು ಇಲ್ಲಿ ಮ್ಲೇಚ್ಛಾಕ್ರಾಂತವಾದ್ದರಿಂದ ಗಮನವಾಸಗಳಿಗೆ ಅನರ್ಹವಾಗುತ್ತದೆ. ನಾವೇ ಸ್ವತಃ ಕರ್ಮಣ್ಯಭೂಮಿಯಲ್ಲಿ ವಾಸಮಾಡುತ್ತಿರುವಾಗ ಅದು ಮ್ಲೇಚ್ಛಾವೃತವಾದರೆ ಪೂರ್ವೋಕ್ತ ಕಾರಣದಿಂದ ಸ್ವದೇಶತ್ಯಾಗವನ್ನು ಮಾಡಬೇಕಾಗುತ್ತದೆ. ಇದನ್ನು ತಪ್ಪಿಸಲು ಶ್ರೀಮದಾಚಾರ್ಯರು 'ಮ್ಲೇಚ್ಛದೇಶೇ' ಎಂಬ ಶಬ್ದವನ್ನು ಇಟ್ಟಿದ್ದಾರೆ . ಚಕ್ರಾಂಕ ಸಾಲಿಗ್ರಾಮಗಳು ಇರುವಾಗ ಮ್ಲೇಚ್ಛಜನರು ಆಕ್ರಮಿಸಿದರೂ ನಮ್ಮ ಭಾರತದೇಶವು ಅಕರ್ಮಣ್ಯವು ವಾಸಾಯೋಗ್ಯವು ಎನಿಸುವುದಿಲ್ಲ. ಈ ಸ್ವರಸಾರ್ಥವನ್ನು ತಿಳಿಸಲು ಶಿಷ್ಟರ ಅನುಷ್ಠಾನವನ್ನು ಉಪಪಾದಿಸಲು ಶ್ರೀಮದಾಚಾರ್ಯರು ಈ ಶ್ಲೋಕವನ್ನು ಇಟ್ಟಿದ್ದಾರೆ.

ಅಶುಚಿಪದವಾದರೂ ಸ್ಮಶಾನಾದಿ ನೈಮಿತ್ತಿಕ ಅಶುದ್ಧಿ ದೇಶವನ್ನು ತಿಳಿಸುತ್ತದೆ. ಅಲ್ಲಿ ಶಿಷ್ಟರು ಸ್ವಭಾವದಿಂದಲೇ ವಾಸ ಮಾಡುವುದಿಲ್ಲ. ಆದರೆ ಪ್ರಾಸಂಗಿಕವಾಗಿ ಬರುವ ಪಿತೃಕರ್ಮ ನಿಮಿತ್ತದಿಂದ ಅಲ್ಲಿಗೆ ಹೋಗುವ ಅನಿವಾರ್ಯಪರಿಸ್ಥಿತಿಯಲ್ಲಿ ಅಶುಚಿತ್ವವು ಪ್ರತಿ-ಬಂಧಕವಾಗದಿರಲಿ ಎಂಬ ಕಾರಣದಿಂದ 'ಅಶುಚೌ' ಎಂದು ಹೇಳಲಾಗಿದೆ. ಚಕ್ರಾಂಕ ಸಾಲಿಗ್ರಾಮ ಸಮೇತವಾಗಿ ಇಂಥಾ ಸ್ಥಳಗಳಿಗೆ ಹೋದಾಗ ಪಿತೃಕರ್ಮಾದಿ ಭಗವತ್ಪೂಜೆಗೆ ಈ ಸ್ಥಳವು ಅರ್ಹವಾಗುತ್ತದೆ ಎಂಬುದೆ ಈ ಶ್ಲೋಕದ ಪ್ರವೃತ್ತಿಗೆ ಮೂಲ ಉದ್ದೇಶ. ಯತ್ರಾಪಿ ನೀಯತೇ ತತ್ರ ವಾರಾಣಸ್ಯಾಃ ಶತಾಧಿಕಮ್ ಎಂದು ಹೇಳಿದ್ದಾರೆ. ಅರ್ಥ- ಈ ಚಕ್ರಾಂಕವನ್ನು ಎಲ್ಲಿ ಒಯ್ದರೂ ಅದು ಕಾಶಿಗಿಂತ ನೂರುಪಟ್ಟು ಅಧಿಕವಾಗುತ್ತದೆ ಎಂದು. ಇಲ್ಲಿಯೂ ಯಥಾಶ್ರುತವಾಗಿ ಅರ್ಥ ಸ್ವೀಕರಿಸಿದರೆ ಅಯೋಗ್ಯರಮನೆಗೆ ಮತ್ತು ವಿದೇಶಕ್ಕೆ ಚಕ್ರಾಂಕ ಒಯ್ದರೆ ಅವು ಕಾಶಿ-ಗಿಂತ ಉತ್ತಮವಾಗಬೇಕಾಗುತ್ತದೆ. ಕಾಶೀಮರಣಕ್ಕಿಂತ ವಿದೇಶಮರಣಕ್ಕೆ ಶ್ರೇಷ್ಠತ್ವ ಬರಬೇಕಾಗುತ್ತದೆ ಶಿಷ್ಟಾನುಷ್ಠಾನ ಮೂಢತನವಾಗುತ್ತದೆ. ಎಲ್ಲಾ ವಿಧಿನಿಷೇಧಪರವಾದ ಶಾಸ್ತ್ರವು ಸಾಲಗ್ರಾಮವಿಲ್ಲದ ದೇಶೆಯಲ್ಲಿ ಎಂದು ಸಂಕೋಚ ಮಾಡಿದರೆ ಸಾಲಿಗ್ರಾಮದ ಇರುವಿಕೆ ಮಾತ್ರದಿಂದ ಎಲ್ಲಾ ಇಷ್ಟಸಿದ್ಧಿಯಾಗುತ್ತಿರಲು ಮಹಾಪ್ರಬಂಧರಚನೆ ಋಷಿಗಳ ಪ್ರವೃತ್ತಿ ವ್ಯರ್ಥವಾದೀತು. ಶಿಷ್ಟಾಚಾರ ಅನುಪಪನ್ನವಾದೀತು. ಆದ್ದರಿಂದ ಈ ರೀತಿಯಾದ ಸ್ತೋತ್ರ ಪರ ಅರ್ಥವಾದವಾಕ್ಯಗಳಿಗೆ ಪ್ರಶಂಸೆಯಲ್ಲಿ ತಾತ್ಪರ್ಯ ಹಾಗೂ ಸ್ವಾರ್ಥದಲ್ಲಿ ಅಧಿಕಾರಿ-ವಿಶೇಷವಿಷಯವಾಗಿ ಅರ್ಥ ಕಲ್ಪಿಸಬೇಕು. ಅಂದರೆ ಪ್ರಶಂಸಾಪರವಾಗಿ ಇರುವ ಅರ್ಥವಾದಗಳಿಗೆ ಸ್ವಾರ್ಥಮಾತ್ರದಲ್ಲಿ ತಾತ್ಪರ್ಯ ಹೇಳಬಾರದು, ಕಿಂತು ಸ್ವಾರ್ಥ ಮತ್ತು ವಿಧಿಪ್ರಶಂಸಾ ಉಭಯದಲ್ಲಿ .

## ಅಥ ಸಮುದ್ರೋಲ್ಲಂಘನವಿಚಾರಃ

ಯದ್ಯಪಿ ಭಾರತವ್ಯತಿರಿಕ್ತ ದೇಶಗಳೆಲ್ಲವೂ ಅಕರ್ಮಣ್ಯದೇಶವಾದ್ದರಿಂದ ಆ ದೇಶಗಳಿಗೆ ಸಮುದ್ರಮಾರ್ಗದಿಂದಾಗಲೀ ಅಥವಾ ಬೇರೆ ಮಾರ್ಗಗಳಿಂದಾಗಲೀ ಹೋಗುವುದು ನಿಷಿದ್ಧವಾದ್ದರಿಂದ ಸಮುದ್ರ ಗಮನವನ್ನು ಪ್ರತ್ಯೇಕವಾಗಿ ನಿಷೇಧಿಸುವುದು ಅನವಶ್ಯಕ. ಆದರೂ ಶಾಸ್ತ್ರಗಳಲ್ಲಿ ಸಮುದ್ರಯಾನವನ್ನು ಪ್ರತ್ಯೇಕವಾಗಿ ನಿಷೇಧಿಸಿರುವುದರಿಂದ ಅದನ್ನು ಇಲ್ಲಿ ಪ್ರಸ್ತಾಪಿಸುವುದು ಅವಶ್ಯಕವೆನಿಸುತ್ತದೆ ಮತ್ತು ಸಮುದ್ರದ ಮೂಲಕ ವಿದೇಶಗಮನ ಮಾಡಿದವರು ಹೆಚ್ಚು ದೋಷಭಾಗಿಗಳಾಗುತ್ತಾರೆ. ಪತನೀಯಗಳಲ್ಲಿ ಮೊದಲು ಸಮುದ್ರಯಾನವನ್ನು ಉದಾಹರಿಸುತ್ತಾರೆ.

ಬೋಧಾಯನಧರ್ಮಸ್ಮೃತಿ - ಅಥ ಪತನೀಯಾನಿ - ( 2 ಖಂಡ, ಸೂತ್ರ - 1)

1. ಸಮುದ್ರಸಂಯಾನಂ ಬ್ರಹ್ಮಸ್ವನ್ಯಾಪಹರಣಂ ಭೂಮ್ಯನೃತಂ, ಸರ್ವಾಪಣ್ಯೈಃ (ಸರ್ವಪಣ್ಯೈಃ) ವ್ಯವಹರಣಂ, ಶೂದ್ರಸೇವನಮ್, ಶೂದ್ರಾಭಿಜನನಮ್, ತದಪತ್ಯತ್ವಮ್ ಚ ॥

1. ಸಮುದ್ರಸಂಯಾನ, ಬ್ರಹ್ಮಸ್ವನ್ಯಾಸಾಪಹರಣ, ಇವುಗಳೆಲ್ಲ ಪತನೀಯವೆಂದರ್ಥ. ಇದರ ವ್ಯಾಖ್ಯಾನಾವಸರದಲ್ಲಿ ಗೋವಿಂದಸ್ವಾಮಿ ವಿರಚಿತ ವಿವರಣದಲ್ಲಿ 'ಪತನೀಯಾನಿ' ಎಂಬುದಕ್ಕೆ ಪತನಾರ್ಹವಾದ ಕರ್ಮಗಳ ಮಹಾಪಾತಕಗಳಿಗಿಂತ ಅಂದರೆ ಗೋಹತ್ಯಾ, ಸ್ವರ್ಣಸ್ಥೇಯ ಮುಂತಾದ ಮಹಾಪಾತಕಗಳಿಗಿಂತ ಸ್ವಲ್ಪಕಡಿಮೆ ಪಾತಕಗಳು ಮತ್ತು ಇನ್ನು ಮುಂದೆ ಹೇಳಲಿರುವ ಉಪಪಾತಕಗಳಿಗಿಂತ ಹೆಚ್ಚುಪಾತಕಗಳು ಎಂದಿದೆ.

ಸಮುದ್ರಸ್ಯ ಸಂಯಾನಂ = ಸಮುದ್ರಸಂಬಂಧಿಯಾದ ಯಾನ, ಪ್ರಯಾಣವೇ ಸಮುದ್ರಯಾನಮ್. ಆದ್ದರಿಂದ ಸಮುದ್ರವನ್ನು ಈ ಕ್ರಮದಿಂದಲೇ ದಾಟಬಾರದು ಎಂದು ಹೇಳಿಲ್ಲವಾದ್ದರಿಂದ ಸಮುದ್ರದ ಮೇಲಾಗಲೀ ಸಮುದ್ರದ ಕೆಳಗಾಗಲೀ ಸಮುದ್ರವನ್ನು ದಾಟಬಾರದು. ಕೆಲವರು ಇಲ್ಲಿ ನೌಕೆಯಿಂದ (ದೋಣಿಯಿಂದ) ಸಮುದ್ರಯಾನವನ್ನು ಮಾಡಬಾರದು. ಬೇರೆ ಉಪಾಯದಿಂದ (ವಿಮಾನ) ಮಾಡಬಹುದು ಎನ್ನುತ್ತಾರೆ. ಈ ರೀತಿಯಾಗಿ ಅರ್ಥಮಾಡಿದರೆ 'ನ ಸುರಾಂ ಪಿಬೇತ್' ಎಂಬ ನಿಷೇಧವು ಕೇವಲ 'ಮದ್ಯಪಾನ' ನಿಷೇಧಪರವಾಗಿರುವುದರಿಂದ ಸುರಾವನ್ನು ಅನ್ನದಜೊತೆಗೆ ಕಲಿಸಿ ಹುಳಿಯನ್ನದಂತೆ ಸುರಾನ್ನವನ್ನು ಭಕ್ಷಿಸಿದರೆ ತಪ್ಪೇನಿಲ್ಲ. ಏಕೆಂದರೆ ಸುರಾ 'ಪಾನ'ಕ್ಕೆ ಮಾತ್ರ ನಿಷೇಧವಲ್ಲವೇ! ಎಂಬುದಕ್ಕೆ ಏನು ಉತ್ತರವೋ, ಅದೇ ಉತ್ತರ ಸಮುದ್ರಯಾನವನ್ನು ಬೇರೆ ಉಪಾಯದಿಂದ ಮಾಡಬಹುದು ಎನ್ನುವುದಕ್ಕೂ ಆಗುತ್ತದೆ. ಸುರಾಪಾನವಿಷಯದಲ್ಲೂ, ಸುರಾಪಾನವೆಂದರೆ ಸುರಾವನ್ನು ಯಾವುದೇ ಮಾರ್ಗದಿಂದಲಾಗಲೀ ಸೇವಿಸಿದರೆ ಅದು ಸುರಾಪಾನವೆಂದೆನಿಸುತ್ತದೆ ಹೇಗೋ ಹಾಗೇ ಸಮುದ್ರಯಾನವನ್ನು ಯಾವುದೋ 'ಒಂದು' ಉಪಾಯದಿಂದ ಸಂಯಾನವನ್ನು

ಮಾಡಬಾರದು ಎಂದಿಲ್ಲವಾದ್ದರಿಂದ ಯಾವುದೇ ಉಪಾಯದಿಂದ ಸಮುದ್ರಯಾನವನ್ನು ಮಾಡಿದರೂ ಅದು ಸಮುದ್ರಯಾನವೆನಿಸಿ ಪಾತಿತ್ಯ ಸಂಪಾದಕವೇ ಆಗಿದೆ.

ಇನ್ನು ,

ಸಮುದ್ರಯಾನಗಮನಂ ಬ್ರಾಹ್ಮಣಸ್ಯ ನ ಶಸ್ಯತೇ ।
ಸಂಭವೇದ್ಯದಿ ಮೋಹೇನ ಪುನಃ ಸಂಸ್ಕಾರಮರ್ಹತಿ । (ಪರಾಶರಸ್ಮೃತಿ )

ಸಮುದ್ರಯಾನಗಮನಂ = ಇಲ್ಲಿ ಯಾನ ಶಬ್ದಕ್ಕೆ ಸಮುದ್ರದಾಟುವುದಕ್ಕೆ ಉಪಯೋಗಿಸುವ ವಾಹನವೆಂದರ್ಥ. ಇಲ್ಲದಿದ್ದಲ್ಲಿ ಗಮನಪದ ವ್ಯರ್ಥವಾದೀತು. ಏಕೆಂದರೆ, ಯಾನಶಬ್ದಾರ್ಥ ಮತ್ತು ಗಮನಶಬ್ದಾರ್ಥ ಒಂದೇ ಆದಾಗ ಮತ್ತೆ ಹೇಳುವುದು ಸರಿಯಿಲ್ಲವಷ್ಟೆ!

ಶ್ಲೋಕಾರ್ಥ:- ಸಮುದ್ರವನ್ನು ದಾಟುವುದು ಬ್ರಾಹ್ಮಣಪದೋಪಲಕ್ಷಿತವಾದ ವರ್ಣಾಶ್ರಮಿಗಳಿಗೆ ನಿಷಿದ್ಧವಾಗಿದೆ. ಅಜ್ಞಾನದಿಂದ ಸಮುದ್ರವನ್ನು ದಾಟಿದಲ್ಲಿ ಪುನಃ ಅವರಿಗೆ ಉಪನಯನಾದಿಗಳಿಂದ ಪ್ರಾಯಶ್ಚಿತ್ತವು ಆಗುತ್ತದೆ.ಆದ್ದರಿಂದ ಸಮುದ್ರಗಮನ ಮಾಡುವುದು ಪಾಪವು ಪಾತಿತ್ಯಸಂಪಾದಕವೂ ಆಗಿದೆ.

ಇನ್ನು ಒಂದು ಅಂಶವೆಂದರೆ,

ಆಗಾರದಾಹೀ ಗರದಃ ಕುಂಡಾಶೀ ಸೋಮವಿಕ್ರಯೀ ।
ಸಮುದ್ರಯಾಯೀ ವಾಂತಾಶೀ ತೈಲಿಕಃ ಕೂಟಕಾರಕಃ ॥
ಏತಾನ್ ವಿಗರ್ಹಿತಾಚಾರಾನ್ ಅಪಾಂಕ್ತೇಯಾನ್ ದ್ವಿಜಾಧಮಾನ್ ।
ದ್ವಿಜಾತಿಪ್ರವರೋ ವಿದ್ವಾನ್ ಉಭಯತ್ರ ವಿವರ್ಜಯೇತ್ ॥

ಸಮುದ್ರಯಾತ್ರಿಗಳು, ನಿಂದಿತಾಚಾರಿಗಳು, ಅಪಾಂಕ್ತೇಯರು ಎಂದಿದ್ದಾರೆ.

ಆಗಾರದಾಹೀ = ಮನೆಸುಡುವವನು, ಗರದಃ = ವಿಷವನ್ನು ಕೊಟ್ಟು ಪರರನ್ನು ಸಂಹರಿಸುವವನು, ಕುಂಡಾಶೀ = ವೇಶ್ಯಾವಾಟಿಕೆ ನಡೆಸುವವರು, ಸೋಮವಿಕ್ರಯೀ = ಸಾರಾಯಿಮಾರುವವನು, ವಾಂತಾಶೀ = ವಾಂತಿಯನ್ನು ತಿನ್ನುವವನು, ತೈಲಕಃ = ಎಳ್ಳಿನಿಂದ ಎಣ್ಣೆಯನ್ನು ಮಾಡಿ ಮಾರುವವನು (ಗಾಣಿಗ), ಕೂಟಕಾರಕಃ = ವಂಚನೆಯನ್ನೇ ಅವಲಂಬಿಸಿ ಜೀವನಮಾಡುವವನು. ಇವುಗಳು ನಿಷಿದ್ಧ. ಇವುಗಳನ್ನು ಮಾಡುವವರು ನಿಂದಿತರಾಗುತ್ತಾರೆ. [1]ಅಪಾಂಕ್ತೇಯರು ಆಗುತ್ತಾರೆ. ಮೇಲೆ ಹೇಳಿರುವ ಪಾಪಗಳಲ್ಲಿ ತಾರತಮ್ಯವಿದ್ದರೂ ಸಮುದ್ರಯಾನವು ನಿಷಿದ್ಧವೆನ್ನುವುದಕ್ಕೆ ಇನ್ನೂ ಹತ್ತು ಹಲವು ಪ್ರಮಾಣಗಳು ಹೀಗಿವೆ –

ಸಮುದ್ರಯಾಯೀ ಕೃತಹಾ ರಥ್ಯಾ ಸಮಯ ಭೇದಕಃ ।

---

೧. ಅಪಾಂಕ್ತೇಯರು = ಒಂದೇ ಪಂಕ್ತಿಯಲ್ಲಿ ಭೋಜನಾದಿಗಳಲ್ಲಿ ಅನರ್ಹರು

ವೇದನಿಂದಾರತಶ್ಚೈವ ದೇವನಿಂದಾರತಃ ತಥಾ ।
ದ್ವಿಜನಿಂದಾರತಶ್ಚೈವ ತೇ ವರ್ಜ್ಯಾ ಶ್ರಾದ್ಧಕರ್ಮಣಿ । ಉಶನಸಸ್ಮೃತಿ 4.33.34

ಸಮುದ್ರಯಾನ ಮಾಡಿದವರು, ಕೃತಘ್ನನು, ರಥಿಕನು, ಗುಟ್ಟನ್ನು ರಟ್ಟುಮಾಡುವವನು, ವೇದನಿಂದೆ ಮಾಡುವವನು ದೇವನಿಂದೆ ಮಾಡುವವನು, ದ್ವಿಜನಿಂದೆ ಮಾಡುವವನು, ಇವರೆಲ್ಲರೂ ಪಾಪಿಗಳಾದ್ದರಿಂದ ಶ್ರಾದ್ಧ ಕರ್ಮದಲ್ಲಿ ವರ್ಜ್ಯರಾಗುತ್ತಾರೆ.

ಸಕೃತ್ಸಮುದ್ರಯಾನೇ ಹಿ ಪ್ರಾಯಶ್ಚಿತ್ತಮ್ ಉದಾಹೃತಮ್ ।
ಬಹುಕಾಲಾಧ್ಯಸನೇ ತು ಪ್ರಾಯಶ್ಚಿತ್ತಂ ಚ ನೈವ ಹಿ । – ಅನೌಮೀ

ಒಂದು ಸಲ ಸಮುದ್ರಯಾನ ಮಾಡಿದರೆ ಅದಕ್ಕೆ ಪ್ರಾಯಶ್ಚಿತ್ತ ಉಂಟೇನೋ ಆದರೆ ಬಹಳಸಲ ಮಾಡಿದರೆ ಅವರಿಗೆ ಪ್ರಾಯಶ್ಚಿತ್ತವೇ ಇಲ್ಲ. ಅಂದಮೇಲೆ ಸಮುದ್ರಯಾನ ಮಾಡುವುದು ಪಾಪವೆಂದಾಯಿತು. ಬೃಹನ್ನಾರದೀಯದಲ್ಲಿ –

ಇಮಾನ್ ಧರ್ಮಾನ್ ಕಲಿಯುಗೇ ವರ್ಜ್ಯಾನಾಹುರ್ಮನೀಷಿಣಃ ।
ಸಮುದ್ರಯಾತ್ರಾಸ್ವೀಕಾರಃ ಕಮಂಡಲುವಿದಾರಣಮ್ ॥

ಸಮುದ್ರಯಾತ್ರೆಯನ್ನು ಮತ್ತು ಕಮಂಡಲುವನ್ನು ವಿದಾರಣೆಮಾಡುವುದನ್ನು ಕಲಿಯುಗದಲ್ಲಿ ಬಿಡಬೇಕೆಂಬುದು ಮುನಿವರೇಣ್ಯರ ಅಭಿಪ್ರಾಯ.

ದ್ವಿಜಸ್ಯಾಬ್ಧೌ ತು ನೌಯಾತುಃ ಶೋಧಿತಸ್ಯಾಪಿ ಸಂಗ್ರಹಃ (ಕಲಿವರ್ಜ್ಯಪ್ರಕರಣ)

ದ್ವಿಜನು ನಾವಾದಿಗಳ ಮೂಲಕ ಸಮುದ್ರಯಾನ ಮಾಡಿದಾಗ ಪ್ರಾಯಶ್ಚಿತ್ತ ಮಾಡಿಕೊಂಡರೂ ಕಲಿಯುಗದಲ್ಲಿ ಅಪರಿಗ್ರಾಹ್ಯನಾಗುತ್ತಾನೆ.

ಆದಿತ್ಯಪುರಾಣದಲ್ಲಿ –

ಕಲೌ ತು ಪಾಪಬಾಹುಲ್ಯಾತ್ ವರ್ಜನೀಯಾನಿ ಮಾನವೈಃ ।
ವಿಧವಾಪುನರುದ್ವಾಹಃ ನೌಯಾತ್ರಾ ತು ಸಮುದ್ರತಃ ॥

ವಿಧವೆಯನ್ನು ಪುನಃ ಮದುವೆ ಮಾಡಿಕೊಳ್ಳುವುದು, ಸಮುದ್ರದಲ್ಲಿ ನಾವಾದಿಗಳಿಂದ ಯಾತ್ರೆ ಮಾಡುವುದು ಕಲಿಯುಗದಲ್ಲಿ ಪಾಪಬಾಹುಲ್ಯವಿರುವುದರಿಂದ ಮಾಡಬಾರದು.

ವಿಪ್ರಾದಿಷು ಅಸವರ್ಣಜೋದ್ವಹಮಥೋ ವಿಪ್ರಾದಿನೌಸಂಸ್ಥಿತಿಮ್ । – ಕಾಲನಿರ್ಣಯೇ

ಬ್ರಾಹ್ಮಣಾದಿಗಳು, ಅಸವರ್ಣರನ್ನು ಮದುವೆಯಾಗುವುದು ಮತ್ತು ಸಮುದ್ರದಲ್ಲಿ ಗಮನಕ್ಕಾಗಿ ನೌ = ದೋಣಿಯನ್ನು ಏರುವುದು ಇವು ಪಾಪಾವಹವಾಗಿವೆ.

ದ್ವಿಜಸ್ಯಾಬ್ಧೌ ತು ನಿರ್ಯಾಣಂ - ದ್ವಿಜನು ಸಮುದ್ರಯಾನ ಮಾಡುವುದು ಮಹಾಪಾಪಕರವಾಗಿದೆ. ಆದ್ದರಿಂದ ಈ ಎಲ್ಲ ಪ್ರಮಾಣಗಳಿಂದ ಸಮುದ್ರಯಾನ ಮಾಡುವುದು ನಿಷಿದ್ಧವೆಂಬುದು ಸ್ಪಷ್ಟ. ಇಲ್ಲಿ ಕೆಲವರು ಸಮುದ್ರಯಾನವನ್ನು ವಿಲಾಸಕ್ಕಾಗಿ ಮಾಡಬಾರದೇ ಹೊರತು ಸದುದ್ದೇಶದಿಂದ ಮಾಡಬಹುದು. ಹಾಗೆ ಮಾಡಿದ ಸಮುದ್ರಯಾನವು ದೋಷವೆನಿಸುವುದಿಲ್ಲವೆನ್ನುತ್ತಾರೆ. ಅದಕ್ಕೆ ಉತ್ತರವೆಂದರೆ "ಸಮುದ್ರಯಾನದ ನಿಷೇಧವು ಅನಾರಭ್ಯಾಧೀತವಾಗಿದೆ, ಅನಭ್ಯನುಜ್ಞಾತವಾಗಿದೆ ಮತ್ತು ವಿಲಾಸಾದಿಗಳಿಗೆ ಮಾತ್ರ ಸಮುದ್ರಯಾನ ಮಾಡಬಾರದು ಎಂಬುದಕ್ಕೆ ಬೀಜ(ಪ್ರಮಾಣ)ವೂ ಇಲ್ಲ".

ಅನಾರಭ್ಯಾಧೀತ = ಯಾವುದೋ ಒಂದು ಪ್ರಕರಣಕ್ಕೆ ಸಂಬಂಧಪಡದೇ ಶ್ರುತಿಸ್ಮೃತಿಗಳಲ್ಲಿ ಅಧೀತವಾದದ್ದೇ ಅನಾರಭ್ಯಾಧೀತ. ಅನಭ್ಯನುಜ್ಞಾತ = ಎಲ್ಲಿಯೂ ಸಮುದ್ರಯಾನ ಮಾಡಬಹುದು ಎಂದು ಅಭ್ಯನುಜ್ಞಾತವಾಗದೇ ಇರುವುದೇ ಅನಭ್ಯನುಜ್ಞಾತ.

ಸಮುದ್ರಯಾನದ ನಿಷೇಧವು ಯಾವುದೇ ಒಂದು ಪ್ರಕರಣಕ್ಕೆ ಸಂಬಂಧಪಡದೇ ಸ್ಮೃತಿಗಳಲ್ಲಿ ಅಧೀತವಾಗಿರುವುದರಿಂದ ನಿಷೇಧವು ಸರ್ವತ್ರ ಪ್ರಾಪ್ತವಾಗುತ್ತದೆ. ಒಂದು ವೇಳೆ ಎಲ್ಲಿಯಾದರೂ ಸಮುದ್ರಯಾನ ಮಾಡಬಹುದು ಎಂದು ಅಭ್ಯನುಜ್ಞಾ ಇದ್ದಲ್ಲಿ ಉತ್ತಮೋದ್ದೇಶದಿಂದ ಹೋಗಬಹುದು ಎಂದು ಅರ್ಥ ಮಾಡಲು ಅವಕಾಶವಿರುತ್ತಿತ್ತೋ ಏನೋ. ಆದರೆ ಆ ತರಹದ ಅಭ್ಯನುಜ್ಞಾ ಇಲ್ಲವಲ್ಲ. ಮತ್ತು ವಿಲಾಸಾದ್ಯರ್ಥ ಎಂದು ಅರ್ಥಮಾಡಲು ಯಾವ ಕಾರಣವೂ ಇಲ್ಲ. ಸಾಮಾನ್ಯವಾಗಿ ಸಮುದ್ರಯಾನ ಮಾಡಬಾರದು ಎಂದಿದ್ದಾಗ ವಿಶೇಷವಾಗಿ ವಿಲಾಸಾದ್ಯರ್ಥವಾಗಿ ಸಮುದ್ರಯಾನ ಮಾಡಬಾರದು. ಉತ್ತಮೋದ್ದೇಶದಿಂದ ಮಾಡಬಹುದು ಎಂದರೆ ವಿಲಾಸಾದ್ಯರ್ಥ ವ್ಯಭಿಚಾರವನ್ನು ಮಾಡಬಾರದು ಉತ್ತಮೋದ್ದೇಶದಿಂದ ವ್ಯಭಿಚಾರವನ್ನೂ ಮಾಡಬಹುದು ಎಂಬುದಕ್ಕೆ ಉತ್ತರಿಸಬೇಕಾಗುತ್ತದೆ. ಹಾಗೂ ಶಿಷ್ಟತ್ವೇನ ಪ್ರಮಿತರು ಪ್ರಾಚೀನರಾದ ಯಾರೂ ಉತ್ತಮೋದ್ದೇಶದಿಂದ ಸಮುದ್ರಯಾನವನ್ನು ಮಾಡಿಲ್ಲ ಮತ್ತು ಮಾಡಿದವರನ್ನು ಗ್ರಹಣವೂ ಮಾಡುತ್ತಿರಲಿಲ್ಲ. ಈ ನಿಷೇಧವನ್ನು ಅಪವಾದಿಸುವ ಪ್ರಮಾಣಗಳು ಎಲ್ಲಿಯೂ ಇಲ್ಲ. ಯದ್ಯಪಿ ಕೆಲವು ಆಧುನಿಕ ನಿಬಂಧಕಾರರು ಸಮುದ್ರಯಾನ ಮಾಡಬಹುದು ಎಂದಿದ್ದರೂ ಅದು ದ್ರವ್ಯಾದಿಲಾಲಸೆಗಳಿಂದ ಬಂದ ಅಪಕ್ವನಿರ್ಣಯವೆಂದು ಅದನ್ನು ಉಪೇಕ್ಷಿಸುವುದೇ ಒಳ್ಳೆಯದು. ಈ ಎಲ್ಲಾ ಪ್ರಮಾಣಗಳಿಂದ ಸಮುದ್ರಯಾನವು ನಿಷಿದ್ಧ ಮತ್ತು ಪಾತಿತ್ಯ ಸಂಪಾದಕವೆನ್ನುವುದರಲ್ಲಿ ಎರಡು ಮಾತಿಲ್ಲ. ಇಲ್ಲಿ ಇನ್ನೂ ಒಂದು ಅಂಶವನ್ನು ಅವಲೋಕಿಸೋಣ.

ಮಾಸಂ ಕಾರಾಗೃಹೇ ವಾಸಃ ನೌಭಿರ್ಯಾತ್ರಾ ದಿನತ್ರಯಮ್ ।
ಮ್ಲೇಚ್ಛವಾಸಃ ತಥಾ ಪಕ್ಷಂ ಯಸ್ಯ ಸ್ಯಾತ್ ಸ ತು ಪಾತಕೀ ॥ ಹೇಮಾದ್ರಿ ।

ಒಂದು ಮಾಸ ಕಾರಾಗೃಹವಾಸಮಾಡುವುದು, ದೋಣಿಯೇ ಮೊದಲಾದುವುಗಳಿಂದ ಮೂರುದಿನ ಪರ್ಯಂತಯಾತ್ರೆ ಮಾಡುವುದು ಮ್ಲೇಚ್ಛದೇಶದಲ್ಲಿ ಒಂದು ಪಕ್ಷ (15ದಿವಸ) ವಿರುವುದು. ಇವುಗಳನ್ನು ಯಾರು ಮಾಡುತ್ತಾರೋ ಅವರು ಪತಿತರಾಗುತ್ತಾರೆ. ಇಲ್ಲಿ 'ನೌಭಿರ್ಯಾತ್ರಾ ದಿನತ್ರಯಮ್' ಎನ್ನುವುದಕ್ಕೆ ಕೆಲವರು ಸಮುದ್ರದಲ್ಲಿ ಅವಿರತವಾಗಿ ಮೂರುದಿನ ಸಮುದ್ರವನ್ನು ದೋಣಿಯಿಂದ ಯಾತ್ರೆ ಮಾಡಬಾರದೇ ಹೊರತು ಮೂರು ದಿನಗಳಿಗಿಂತ ಕಡಿಮೆ ಅವಧಿಯ ಸಮುದ್ರಯಾನವನ್ನು ಮಾಡಬಹುದು ಎನ್ನುತ್ತಾರೆ . ಇದಕ್ಕೆ ಉತ್ತರ. ಸಮುದ್ರಯಾನವನ್ನು ಸಾಮಾನ್ಯವಾಗಿ ಪತನೀಯಗಳಲ್ಲಿ ಗ್ರಹಣ ಮಾಡುವುದರಿಂದ ದಿನತ್ರಯಾಧಿಕವಾದ ಸಮುದ್ರಯಾನವು ಪಾಪಾಧಿಕ್ಯಕ್ಕೆ ಮಾತ್ರ ಕಾರಣ. ಆದರೆ ದಿನತ್ರಯಕ್ಕಿಂತ ಕಡಿಮೆ ಅವಧಿಯ ಸಮುದ್ರಯಾನವು ದಿನತ್ರಯಾಧಿಕ ಸಮುದ್ರಯಾನಕ್ಕಿಂತ ಕಡಿಮೆ ಪಾಪಾವಹವಾಗುತ್ತದೆ. ತೀರ್ಥಯಾತ್ರಾರ್ಥವಾಗಿ ಸಮುದ್ರಯಾನವು ಕೇವಲ ಕೆಲವು ನಿಮಿಷಗಳಿರುತ್ತವೆ. ತೀರ್ಥಯಾತ್ರಾರ್ಥಕ್ಕಾಗಿಯೂ ಮೂರುದಿನಾಧಿಕ ಸಮುದ್ರ-ಯಾನವು ನಿಷಿದ್ಧವೇ. ಆದ್ದರಿಂದಲೇ ಗಂಗಾಸಾಗರಸಂಗಮದ ದರ್ಶನಕ್ಕಾಗಿ ದಕ್ಷಿಣದಿಂದ ಸಮುದ್ರಯಾನವು ನಿಷಿದ್ಧವೆನಿಸುತ್ತದೆ.

ಅಥವಾ 'ನೌಭಿರ್ಯಾತ್ರಾ ದಿನತ್ರಯಮ್' ಎನ್ನುವುದಕ್ಕೆ ಸಮುದ್ರಯಾನವು ವಿಷಯವೇ ಅಲ್ಲ ನದ್ಯಾದಿಗಳಲ್ಲಿ ಮಾಡುವ ದಿನತ್ರಯಾಧಿಕನೌಕಾಯಾನವೂ ನಿಷಿದ್ಧವಾಗಿದೆ. ಅದು ಸಮುದ್ರದಲ್ಲಾಗಿರಬಹುದು ಅಥವಾ ನದಿಯಾಗಿರಬಹುದು. ಅದು ನಿಷಿದ್ಧವೇ. ಆದರೆ ಸಮುದ್ರಯಾನದ ತರಹ ನದೀಯಾನ ಸ್ವರೂಪತಃ ನಿಷಿದ್ಧವಲ್ಲ. ಆದರೆ ಅವಿರತವಾದ ದಿನತ್ರಯಾಧಿಕವಾದ ನದೀಯಾನ ಮಾತ್ರವೇ ನಿಷಿದ್ಧ.

'ಮ್ಲೇಚ್ಛಾವಾಸಃ ತಥಾ ಪಕ್ಷಂ' ಇಲ್ಲಿ 'ಮ್ಲೇಚ್ಛಭೂಯಿಷ್ಠವಾದ ಕರ್ಮಣ್ಯದೇಶದಲ್ಲಿ 15ದಿವಸಗಳ ಮೇಲೆ ವಾಸಮಾಡಬಾರದು' ಎಂದೇ ಅರ್ಥ. ಏಕೆಂದರೆ, ಮ್ಲೇಚ್ಛದೇಶ ಗಮನವೇ ಪಾತಿತ್ಯಸಂಪಾದಕವೆಂದಮೇಲೆ ಅಲ್ಲಿ ವಾಸಮಾಡಿದ 15ನೇದಿವಸ ಪಾತಿತ್ಯ ಬರುತ್ತದೆ ಎಂಬುವುದು ವ್ಯರ್ಥ ಮತ್ತು ಪರಸ್ಪರವಿರೋಧವು ಉದ್ಭವಿಸುತ್ತಿದೆ. ಇಲ್ಲಿ ಕೆಲವರು ಸಮುದ್ರಯಾತ್ರಾ ನಿಷೇಧವು ಕಲಿವರ್ಜ್ಯಪ್ರಕರಣದಲ್ಲಿ ಪಠಿತವಾಗಿರುವುದರಿಂದ ಬೇರೆ ಯುಗದಲ್ಲಿ ಸಮುದ್ರಯಾತ್ರಾ ಮಾಡಬಹುದು ಎನ್ನುತ್ತಾರೆ. ಮತ್ತು ಧರ್ಮಾಧಿಸಾರದಲ್ಲಿ ಗರ್ಭಿಣೀಪತಿಯು ವಿದೇಶಗಮನವನ್ನು ಮತ್ತು ಸಮುದ್ರಯಾನವನ್ನು ಮಾಡಬಾರದು ಎಂದಿರುವುದರಿಂದ ಗರ್ಭಿಣೀಪತಿ ಮಾತ್ರ ಸಮುದ್ರಯಾನವನ್ನಾಗಲೀ, ವಿದೇಶಗಮನ-ವನ್ನಾಗಲೀ ಮಾಡಬಾರದು ಬೇರೆಯವರು ಮಾಡಬಹುದು ಎನ್ನುತ್ತಾರೆ.

ಸಮುದ್ರಯಾನ ಸಾಮಾನ್ಯವೇ ಪಾಪಾವಹವಾದಾಗ ಅದಕ್ಕೆ ಕೃತಯುಗದಲ್ಲಿ ಅಥವಾ ಗರ್ಭಿಣೀಪತಿಗೆ ಮಾತ್ರ ನಿಷೇಧವೆನ್ನುವುದು ಕೂಡುವುದಿಲ್ಲ. ಹೇಗೆ 'ನಾನೃತಂ ವದೇತ್' =

ಸುಳ್ಳನ್ನು ಹೇಳಬಾರದು ಎಂದು ಸಾಮಾನ್ಯನಿಷೇಧ ಇರುವುದರಿಂದ ದರ್ಶಪೂರ್ಣಮಾಸ ಪ್ರಕರಣದಲ್ಲಿ ಇರುವ ಅನೃತವಚನ ನಿಷೇಧವು ಸಾಮಾನ್ಯನಿಷೇಧವನ್ನು ಸಂಕೋಚಿಸುವು-ದಿಲ್ಲವೋ, ಅದರಂತೆ ಇನ್ನೂ ಒಂದು ವ್ಯತಿರೇಕ ಉದಾಹರಣೆಯೆಂದರೆ, ಸರ್ವಕಾಲದಲ್ಲೂ ನಿಷಿದ್ಧವಾದ ಅನ್ಯಥಾಜ್ಞಾನಕ್ಕೆ 'ನ ಕಲೌ ನಿರ್ಗುಣಭಾವನಾ ಸುಖಾಯ' ಎಂದು ಹೇಳಿದ್ದರಿಂದ ಕಲಿಯುಗದಲ್ಲಿ ಮಾತ್ರ ಅನ್ಯಥಾಜ್ಞಾನ ನಿಷಿದ್ಧವೆನ್ನಬೇಕಾಗುತ್ತದೆ.

ಗರ್ಭಿಣೀಪತಿಯರಲ್ಲದ ಕೃತಯುಗದ ಋಷಿಗಳು ಸಮುದ್ರೋಲ್ಲಂಘನ ವಿರೋಧವನ್ನು ಮಾಡಿದ್ದಾರೆ. ಇದನ್ನೇ ತಿಳಿಸುವ ನಾರಾಯಣಸ್ಮೃತಿಯು ಸಮುದ್ರೋಲ್ಲಂಘನವನ್ನು ವಿರೋಧಿಸುತ್ತದೆ.

ಕೃತಾದೌ ತು ಮಹೀಪಾಲೋ ವೇನೋ ನಾಮ ನೃಪೋತ್ತಮಃ ।
ಶಶಾಸ ಪೃಥಿವೀಂ ಸರ್ವಾಂ ಸಕುಲಾದ್ರಿಮಹಾರ್ಣವಾಮ್ ।
ದುರಾತ್ಮಾ ಸ ತು ಕ್ರೌರ್ಯೇಣ ಬ್ರಾಹ್ಮಣಾನನ್ವಶಾಸತ ।
ಯೂಯಮದ್ಯಪ್ರಭೃತಿ ವೈ ಸಮುದ್ರೇ ಯಾನಮಾರ್ಗತಃ ।
ದ್ವೀಪಾದ್ ದ್ವೀಪಾಂತರಂ ಗತ್ವಾ ಕುರುಧ್ವಂ ಸರ್ವವಿಕ್ರಯಮ್ ।
ವಿಧವಾಪುನರುದ್ವಾಹಂ ಯಥೇಚ್ಛಂ ನ ವಿಚಾರಣಾ ।
ಪಶುಭಕ್ಷಮಥಾತಿಥ್ಯವ್ಯಾಜೇನಾಚರಥ ದ್ವಿಜಾಃ ।
ಗೃಹೇ ಪಚಂತು ಯುಷ್ಮಾಕಂ ಶೂದ್ರಾಃ ಶ್ರಾದ್ಧೇಽಪಿ ನಿತ್ಯಶಃ ।
ತೀರ್ಥಸೇವಾವ್ಯಾಜಮಾತ್ರಾತ್ ತ್ಯಜಧ್ವಂ ಶ್ರೌತಕರ್ಮ ಚ ।
ಯತಯಸ್ಸರ್ವವರ್ಣೇಷು ಭಿಕ್ಷಾಂ ಕುರ್ವಂತು ಕಾಮತಃ ।
ಬ್ರಾಹ್ಮಣಾಶ್ಶೂದ್ರಗೇಹೇಷು ಭುಂಜಂತು ಚ ಯಥೇಚ್ಛಯಾ ।
ಕಾಲಾಸಹಿಷ್ಣವೋ ವೃದ್ಧಾಃ ಭೃಗುಪಾತಂ ಚರಂತು ಭೋಃ ।
ಯೋ ಮಚ್ಛಾಸನಮತ್ಯುಗ್ರಮನ್ಯಥಾ ಕರ್ತುಮಿಚ್ಛತಿ ।
ಅಸಿನಾ ತೀಕ್ಷ್ಣಧಾರೇಣ ವಧ್ಯ ಏವ ನ ಸಂಶಯಃ ।
ಇತಿ ವೇನವಚಃ ಶ್ರುತ್ವಾ ಪರ್ಯತಪ್ಯಂತ ಪೀಡಿತಾಃ । 13
ಶಪ್ತೋ ಯದಿ ಭವೇದೇಷಃ ರಾಜ್ಯಂ ಭೂಯಾದನಾಯಕಮ್ ।
ಅಶಪ್ತಶ್ಚೇದ್ಭವೇತ್ಪೀಡಾ ಕಥಂ ಕಾರ್ಯಮಿತಃ ಪರಮ್ ।
ಇತಿ ಚಿಂತ್ಯ ಮಹಾತ್ಮಾನಃ ಸಂಘೀಭೂಯ ಸಭಾಂತರೇ ।
ವೇನಂ ಮಹೀಪತಿಂ ಬ್ರೂಯುಃ ವಿಪ್ರಾಃ ಪ್ರಾಣಪರೀಪ್ಸವಃ ।
ಭೋ ಭೋ ವೇನ ಮಹೀಪಾಲ ಕಿಮರ್ಥಂ ನಃ ಪ್ರಬಾಧಸೇ ।
ಅಶಾಸ್ತ್ರೀಯಾನಿಮಾನ್ ಕೃತ್ವಾನ್ಮಹರ್ಷಿಕಥಿತಾನ್ ಪ್ರಭೋ ।

ನಿಪಾತಯಸಿ ನೋ ಘೋರೇ ನಿರಯೇ ಕಿಂ ಫಲಂ ತವ ।
ಋಷಿಭಾಷಿತಮೇವಾದ್ಯ ಕರಿಷ್ಯಾಮೋ ಮಹೀಪತೇ ।
ನಾನ್ಯತ್ ಕಿಂಚಿತ್ ಕರಿಷ್ಯಾಮಃ ಪ್ರಾಣೈಃ ಕಂಠಗತೈರಪಿ ।
ಏತಚ್ಛ್ರುತ್ವಾಽಥ ಭೂಪಾಲೋ ವೇನಃ ಕ್ರೋಧಪರಿಪ್ಲುತಃ ।
ಅಷ್ಟಾದಶಸಹಸ್ರಂ ತು ಋಷೀನಾನಾಯ್ಯ ಸತ್ವರಮ್ ।
ಸ್ತಂಭೇಷು ಪಂಕ್ತಿಶೋ ಬದ್ಧ್ವಾ ಕಶೈರಭ್ಯಹನತ್ಸ್ವಯಮ್ ।
ತೇನ ಸಂಪೀಡ್ಯಮಾನಾಸ್ತೇ ಘೋಷಯಾಂಚಕ್ರಿರೇ ನೃಪಮ್ ।
ಭೋ ಭೋ ರಾಜನ್ ಮಹೀಪಾಲ ಕಿಮರ್ಥಂ ನಃ ಪ್ರಬಾಧಸೇ ।

ವೇನ ಉವಾಚ

ಅಮನೋರಂಜಕಾನ್ಯದ್ಯ ಶಾಸ್ತ್ರಾಣಿ ರಚಿತಾನಿ ಹಿ ।
ರಂಜಕಾನ್ಯೇವ ಸರ್ವೇಷು ವದಧ್ವಂ ತತ್ಪ್ರಿಯಂ ಮಮ ।
ನಾನಾದೇಶೇಷು ವಿಪ್ರಾದ್ಯಾಃ ನೌಯಾನಾತ್ ಪ್ರಚರಂತ್ವಿತಿ ಭೋಃ ।
ವಿಧವಾ ಪುನರುದ್ವಾಹಂ ಚರಂತು ಪೃಥಿವೀತಲೇ ।
ಪ್ರಚರಂತು ಪಶೋರ್ಹಿಂಸಾಂ ಮಧುಪರ್ಕೇ ದ್ವಿಜಾತಯಃ ।
ಶೂದ್ರಗೇಹೇಷು ಭುಂಜಂತು ದ್ವಿಜಗೇಹೇ ಪಚಂತು ತೇ ।
ಭಿದಾವತ್ಸರ್ವವರ್ಣೇಷು ಭೈಕ್ಷಾಚರ್ಯಂ ಚರಂತು ಚ ।
ದೀರ್ಘಕಾಲಾಸಹಾ ವೃದ್ಧಾ ಚರಂತು ಭೃಗುಪಾತನಮ್ ।
ಕಾಮಮಗ್ನೀನ್ ಪರಿತ್ಯಜ್ಯ ತೀರ್ಥಸೇವಾಂ ಚರಂತು ಚ ।
ಇತ್ಯಾಕರ್ಣ್ಯ ಚ ತದ್ವಾಕ್ಯಂ ವೇಪಮಾನಾಃ ಮಹರ್ಷಯಃ ।
ನೌಯಾತ್ರಾದ್ಯಂ ತ್ವಷ್ಟಕರ್ಮ ಹ್ಯನುಜಾನಂತಿ ದುಃಖಿತಾಃ ।
ತತೋ ವಿಸೃಜ್ಯ ಭೂಪಾಲೋ ಮಹರ್ಷೀನಮಿತೌಜಸಃ ।
ಶಶಾಸ ಪೂರ್ವವತ್ ಪೃಥ್ವೀಂ ಪರಿಪೂರ್ಣಮನೋರಥಃ ।
ತತಃಪ್ರಭೃತಿ ವಿಪ್ರಾದ್ಯಾಃ ನೌಯಾತ್ರಾದ್ಯಷ್ಟಕರ್ಮಣಿ ।
ಪ್ರವೃತ್ತಾ ಋಷಿವಾಕ್ಯೇನ ಧರ್ಮಬುದ್ಧ್ಯಾ ಚ ಮೋಹಿತಾಃ ।
ಯುಗತ್ರಯೇಷು ಯಾತೇಷು ತತಃ ಪ್ರಾಪ್ತೇ ಕಲೌ ಯುಗೇ ।
ಬದರೀವನಮಾಸಾದ್ಯ ಸಂಘೀಭೂಯ ಮಹರ್ಷಯಃ ।
ವಿಚಿನ್ತ್ಯ ವಿಧಿಯೋಗೇನ ಕೃತ್ಯಾನ್ಯೇತಾನ್ಯವಾರಯನ್।
ತಸ್ಮಾತ್ ಕಲೌ ತ್ವಿಮಾನ್ ಧರ್ಮಾನ್ ವರ್ಜ್ಯಾನಾಹುರ್ಮಹರ್ಷಯಃ ।
ಕಲೌ ಯುಗೇ ತು ಸಂಪ್ರಾಪ್ತೇ ನೌಯಾತ್ರಾದಿ ಕರೋತಿ ಯಃ ।

ಪತಿತ್ವಾ ನಿರಯೇ ಘೋರೇ ದುಃಖಮೇತಿ ಮಹತ್ತರಮ್ ।
ತಸ್ಮಾದಿಮಾನ್ ಕಲೌ ಧರ್ಮಾನ್ ವರ್ಜ್ಯಾನಾಹುರ್ಮಹರ್ಷಯಃ । 31 ।
ಇಮಾನ್ ಕೃತ್ವಾ ಕಲಿಯುಗೇ ನಿಷ್ಕೃತಿರ್ನ ವಿಧೀಯತೇ ।
ಯದಿ ನಿಷ್ಕೃತಿಮಾಪನ್ನಃ ಸೇತುಸ್ನಾನಾದಿನಾ ಕ್ವಚಿತ್ ।
ತಥಾಽಪಿ ನ ಪರಿಗ್ರಾಹ್ಯಃ ಪಾಪಬಾಹುಲ್ಯಕಂ ಯತಃ ।
ಕಿಮನ್ಯತ್ ಶ್ರೋತುಕಾಮೋಽಸಿ ನೌಯಾತ್ರಾದ್ಯಷ್ಟಕರ್ಮಣಿ ॥ 33 ॥

ತಾತ್ಪರ್ಯಾರ್ಥ – ಕೃತಯುಗದಲ್ಲಿ ಸಕಲಭೂಮಿಯನ್ನೂ ಆಳುತ್ತಿದ್ದ ದುರಾತ್ಮನಾದ ವೇನ ಮಹಾರಾಜನು ಕ್ರೌರ್ಯದಿಂದ ಬ್ರಾಹ್ಮಣರಿಗೆ ಹೀಗೊಂದು ಆದೇಶವನ್ನು ಹೇಳುತ್ತಾನೆ. ಅದೇನೆಂದರೆ ಹೇ ಬ್ರಾಹ್ಮಣರೇ ! ನೀವು ಇಂದಿನಿಂದ ಸಮುದ್ರಯಾನದ ಮೂಲಕ ದ್ವೀಪಗಳಿಗೆ ಹೋಗಿರಿ. ಅಲ್ಲಿ ಮಾರಬಾರದ್ದನ್ನು ಮಾರಿರಿ. ಯೋಚನೆ ಮಾಡದೆ ಯಥೇಚ್ಛವಾಗಿ ವಿಧವೆಯನ್ನು ಪುನಃ ಮದುವೆಯಾಗಿರಿ. ಪಶುಭಕ್ಷಣವನ್ನು ಆತಿಥ್ಯಕ್ಕೆ ಉಪಯೋಗಿಸಿರಿ. ನಿಮ್ಮ ಮನೆಗಳಲ್ಲಿ ಶೂದ್ರರು ಅಡುಗೆಯನ್ನು ಮಾಡಲಿ. ಶ್ರಾದ್ಧದಲ್ಲಿಯೂ ಶೂದ್ರರೇ ಅಡುಗೆಯನ್ನು ಮಾಡಲಿ. ತೀರ್ಥಯಾತ್ರಾ ಎಂಬುವ ಕಾರಣದಿಂದ ಶ್ರೌತಕರ್ಮವನ್ನು ಮಾಡಬೇಡಿ. ಸನ್ಯಾಸಿಗಳು ಸರ್ವವರ್ಣದವರಲ್ಲೂ ಭಿಕ್ಷೆಯನ್ನು ಬೇಡಲಿ. ಬ್ರಾಹ್ಮಣರು ಶೂದ್ರರ ಮನೆಯಲ್ಲಿ ಭುಂಜಿಸಲಿ, ವೃದ್ಧರು ಭೃಗುಪಾತ (ಗಾಯತ್ರೀ ಜಪತ್ಯಾಗ)ವನ್ನು ಮಾಡಲಿ. ಯಾರು ನನ್ನ ಈ ಆದೇಶಗಳನ್ನು ಉಲ್ಲಂಘಿಸಲು ಇಚ್ಛಿಸುತ್ತಾರೋ ಅವರು ತೀಕ್ಷ್ಣವಾದ ನನ್ನ ಖಡ್ಗಗಳಿಂದ ಕೊಲ್ಲಲ್ಪಡುತ್ತಾರೆ.

ಈ ರೀತಿಯಾದ ವೇನರಾಜನ ಮಾತಿನಿಂದ ಪೀಡಿತರಾದ ಬ್ರಾಹ್ಮಣರು ದುಃಖಿಸಿದರು. ಬ್ರಾಹ್ಮಣರು ಹೀಗೆ ಆಲೋಚಿಸಿದರು. ಒಂದು ವೇಳೆ ನಾವು ವೇನನಿಗೆ ಶಾಪ ನೀಡಿದರೆ ರಾಜ್ಯವು ರಾಜರಹಿತವಾಗುತ್ತದೆ. ಶಾಪವನ್ನು ನೀಡದಿದ್ದರೆ ನಮ್ಮನ್ನು ಪೀಡಿಸುತ್ತಾನೆ. ಹೇಗೆ ಮುಂದುವರೆಯಬೇಕು ಎಂಬ ಬಗ್ಗೆ ಬೇರೆ ಒಂದು ಸಭೆಯಲ್ಲಿ ಆಲೋಚನೆ ಮಾಡಿ ಬ್ರಾಹ್ಮಣರು ವೇನನಿಗೆ ಹೀಗೆಂದರು.

ಹೇ ರಾಜನೇ ! ನಮ್ಮನ್ನು ಏಕೆ ದುಃಖಪಡಿಸುತ್ತೀಯ. ಅಶಾಸ್ತ್ರೀಯವಾದ ಈ ಕಾರ್ಯಗಳನ್ನು ನಾವು ಮಾಡಿದರೆ ಘೋರ ನರಕಕ್ಕೆ ಹೋಗಬೇಕಾಗುತ್ತದೆ. ಇದರಿಂದ ನಿನಗೇನು ಫಲ. ಆದ್ದರಿಂದ ಮುನಿವರೇಣ್ಯರು ಹೇಳಿದ ರೀತಿಯಲ್ಲೇ ನಾವು ಶೌಚಾನುಷ್ಠಾನವನ್ನು ಮಾಡುತ್ತೇವೆ. ಪ್ರಾಣಹೋದರೂ ಸರಿಯೇ ಬೇರೆ ಏನನ್ನೂ ಮಾಡುವುದಿಲ್ಲ ಎಂದರು. ಇದನ್ನು ಕೇಳಿ ಕೃದ್ಧನಾದ ವೇನನು 18,000 ಋಷಿಗಳನ್ನು ಕಂಬಗಳಲ್ಲಿ ಕಟ್ಟಿ ಛಾವಟಿಯಿಂದ ಹೊಡೆದು ಹಿಂಸಿಸಿದನು. ಆಗ ಎಲ್ಲಾ ಋಷಿಗಳು ಆಕ್ರಂದಿಸಿದರು. ಆಗ ವೇನನು ಹೀಗೆಂದನು. ಮುನಿವರೇಣ್ಯರು ರಚಿಸಿರುವ ಶಾಸ್ತ್ರವು ಮನೋರಂಜಕವಾಗಿಲ್ಲ. ಬ್ರಾಹ್ಮಣರಾದ ನೀವು ನನಗೆ ಯಾವುದು

ಇಷ್ಟವೋ ಅಂತಹ ಮನೋರಂಜಕವಾದ ಶಾಸ್ತ್ರವನ್ನು ಬರೆಯಿರಿ. ನಾನಾ ದುಷ್ಟದೇಶಗಳಿಗೆ ನೌಕಾಯಾನದ ಮೂಲಕ ಸಂಚರಿಸಿರಿ. ವಿಧವೆಯನ್ನು ಪುನಃ ಮದುವೆಯಾಗಿರಿ. ಮಧುಪರ್ಕಾದಿಗಳಲ್ಲಿ ಪಶುಹಿಂಸೆಯಾಗಲಿ. ಶೂದ್ರರ ಮನೆಯಲ್ಲಿ ಬ್ರಾಹ್ಮಣರು ಭೋಜನಮಾಡಲಿ. ಬ್ರಾಹ್ಮಣಗೃಹದಲ್ಲಿ ಶೂದ್ರರು ಅಡುಗೆ ಮಾಡಲಿ. ಸರ್ವವರ್ಣದವರೂ ಭಿಕ್ಷಾಟನೆ ಮಾಡಲಿ. ವೃದ್ಧರು ಭೃಗುಪಾತ (ಗಾಯತ್ರೀಜಪತ್ಯಾಗ)ವನ್ನು ಮಾಡಲಿ. ಅಗ್ನಿಹೋತ್ರವನ್ನು ತ್ಯಜಿಸಿ ವೃಥಾ ಸಂಚರಿಸಿರಿ. ಈ ಮಾತುಗಳನ್ನು ಕೇಳಿದ ದುಃಖಿತರಾದಂತಹ ಋಷಿಗಳು ನೌಕಾಯಾತ್ರಾದಿ ಅಷ್ಟಕರ್ಮಗಳಲ್ಲಿ ಪ್ರವೃತ್ತರಾದರು. ರಾಜನಾದ ವೇನನು ಪೂರ್ವದಂತೆ ಸಂತುಷ್ಟನಾಗಿ ರಾಜ್ಯವನ್ನು ಆಳಿದನು. ಅವತ್ತಿನಿಂದ ಯುಗತ್ರಯಕಾಲ ಪರ್ಯಂತ ನೌಕಾಯಾತ್ರಾದಿ ಅಷ್ಟಕರ್ಮಗಳನ್ನು ಮಾಡುತ್ತಿದ್ದರು. ಆನಂತರದಲ್ಲಿ ಕಲಿಯುಗ ಬಂದಾಗ ಮಹರ್ಷಿಗಳು ಬದರೀವನದಲ್ಲಿ ವಿಧಿಕ್ರಮದಿಂದ ನೌಕಾಯಾನಾದ್ಯಷ್ಟಕರ್ಮಗಳನ್ನು ಮಾಡಿದ ಬ್ರಾಹ್ಮಣರ ಪಾಪಗಳನ್ನು ಕಳೆದರು. ಆ ಕಾರಣದಿಂದ ಕಲಿಯುಗದಲ್ಲಿ ನೌಕಾಯಾನಾದ್ಯಷ್ಟ-ಕರ್ಮಗಳನ್ನು ಮಾಡಬಾರದು. ಇದನ್ನು ಮಾಡಿದವರು ಪತಿತರಾಗಿ ಘೋರ ನರಕದಲ್ಲಿ ಮಹತ್ತರ ದುಃಖವನ್ನು ಹೊಂದುತ್ತಾರೆ. ನೌಕಾಯಾನಾದ್ಯಷ್ಟಕರ್ಮಗಳನ್ನು ಮಾಡಿದವರಿಗೆ ಪ್ರಾಯಶ್ಚಿತ್ತವೇ ಇಲ್ಲ. ಒಂದು ವೇಳೆ ಸೇತುಸ್ನಾನಾದಿಗಳಿಂದ ಪ್ರಾಯಶ್ಚಿತ್ತ ಹೊಂದಿದರೂ ಪಾಪಬಾಹುಲ್ಯ ಇರುವುದರಿಂದ ಯಾರಿಂದಲೂ ಪರಿಗ್ರಾಹ್ಯನಾಗುವುದಿಲ್ಲ. ಆದ್ದರಿಂದ ಸಮುದ್ರಯಾನಾದಿ ವಿಷಯ ಗರ್ಭಿಣೀಪತಿಗಾಗಲೀ ಕಲಿಯುಗ ಮಾತ್ರವಿಷಯಕವಲ್ಲ.

ಋಗ್ವೇದದಲ್ಲಿ –

**ತುಗ್ರೋ ಭುಜ್ಯುಮಶ್ವಿನಾ ಉದಮೇಘೇರಯಿನ ಕಶ್ಚಿನ್ಮಮೃವಾಂ ಅವಾಹಾಃ ತಮೂಹತುಃ ನೌಭಿರಾತ್ಮನ್ವತೀಭಿರಂತರಿಕ್ಷ ಪ್ರುಂಭಿರಪಾದುಕಾಭಿಃ ಇತಿ ।**

**ಆಖ್ಯಾಯಿಕಾಪರಾ ಇಮಾ ಋಚಃ ಇತಿ ವ್ಯಾಖ್ಯಾತಂ ಸಾಯಣಭಾಷ್ಯೇ ।**

ಅರ್ಥ :- ತುಗ್ರನೆಂಬುವನು ಅಶ್ವಿನೀದೇವತೆಗಳ ಪ್ರಿಯಶಿಷ್ಯನು. ರಾಜರ್ಷಿಯೂ ಆಗಿದ್ದನು. ಅವನು ದ್ವೀಪಾಂತರದಲ್ಲಿರುವ ತನ್ನ ಶತ್ರುಗಳನ್ನು ಜಯಿಸಲು ತನ್ನ ಸೇನೆಯ ಜೊತೆಗೆ ದೋಣಿಯ ಮೂಲಕ ತನ್ನ ಮಗನಾದ ಭುಜ್ಯುವನ್ನು ಕಳಿಸಿದನು. ಆ ದೋಣಿಯು ಸ್ವಲ್ಪದೂರ ಹೋದಮೇಲೆ ಮುರಿಯಿತು. ಆಗ ತತ್ಕ್ಷಣದಲ್ಲಿ ಭುಜ್ಯುವು ಅಶ್ವಿನೀದೇವತೆಗಳನ್ನು ಸ್ತೋತ್ರಮಾಡಿದನು. ಸ್ತುತರಾದ ಅಶ್ವಿನೀದೇವತೆಗಳು ತಮ್ಮ ದೋಣಿಯಲ್ಲಿ ಸೇನೆಯಿಂದ ಸಹಿತನಾದ ಭುಜ್ಯುವನ್ನು ಹತ್ತಿಸಿಕೊಂಡು ಮೂರುದಿನಗಳಾದ ಮೇಲೆ ತಂದೆ ತುಗ್ರನಲ್ಲಿ ಒಪ್ಪಿಸಿದರು. ಅಂದಮೇಲೆ ರಾಜರ್ಷಿಯಾದ ಭುಜ್ಯು ಮತ್ತು ಸೈನಿಕರು ಸಹ ಸಮುದ್ರ-ನೌಕಾಯಾನವನ್ನು ಮಾಡಿದಂತಾಯಿತು. ಸಮುದ್ರಯಾನಸಾಮಾನ್ಯವೇ ನಿಷಿದ್ಧವಾದರೆ ಈ ಮೇಲಿನ ಸಮುದ್ರಯಾನ ಮಾಡಿದವರಿಗೆ ಅಶ್ವಿನೀದೇವತೆಗಳ ಅನುಗ್ರಹ ಹೇಗೆ ಕೂಡುತ್ತದೆ?

ಮತ್ತು ವಸಿಷ್ಠ, ಕಶ್ಯಪ, ಕಣ್ವಾದಿಗಳಿಂದ ಸಮುದ್ರಯಾನವು ಮಾಡಲ್ಪಟ್ಟಿದೆ ಎಂದು ಪುರಾಣಗಳಲ್ಲಿ ಪ್ರಮಾಣಗಳಿವೆ. ಹಾಗೇ ಪಾಂಡವರು ಕೂಡ ಸಮುದ್ರಯಾನ, ವಿದೇಶಗಮನ ಮಾಡಿದ್ದಾರೆ ಎಂದು ಮಹಾಭಾರತದ ಸಭಾಪರ್ವದಲ್ಲಿದೆ.

ಶಾಕಲದ್ವೀಪವಾಸಶ್ಚ ಸಪ್ತದ್ವೀಪೇಷು ಯೇ ನೃಪಾಃ ।
ಸತಾನಪಿ ಮಹೇಶ್ವಾಸಾನ್ ವಿಜಿಗ್ಯೇ ಭರತರ್ಷಭಃ ।
ಸಕಿರಾತೈಶ್ಚ ಚೀನೈಶ್ಚ ವೃತಃ ಪ್ರಾಗ್ಜ್ಯೋತಿಷೋऽಭವತ್ ।

ಇತಿ ಅಯಂ ಅರ್ಜುನವಿಜಯಃ

ಸಿಂಹಾನಾಮಧಿಪಂ ಚೈವಂ ಯೇ ಚ ಸಾಗರವಾಸಿನಃ ।
ಸರ್ವಾನ್ ಮ್ಲೇಂಛಗಣಾಂಶ್ಚೈವ ವಿಜಿಗ್ಯೇ ಭರತರ್ಷಭ ॥

ಇತಿ ಅಯಂ ಭೀಮಸೇನವಿಜಯಃ

ತತಃ ಸಾಗರಕುಕ್ಷಿಸ್ಥಾನ್ ಮ್ಲೇಚ್ಛಾನ್ ಪರಮದಾರುಣಾನ್ ।
ಪಪ್ಲವಾನ್ ಬರ್ಬರಾನ್ ಕಿರಾತಾನ್ ಯವನಾನ್ ಸ್ಮೃತಾನ್ ಇತಿ ॥

ಅಯಂ ನಕುಲವಿಜಯಃ ।

ಶಾಕಲದ್ವೀಪ ರಾಜರನ್ನು ಸಪ್ತದ್ವೀಪರಾಜರನ್ನು ಕಿರಾತರನ್ನು, ಚೀನರನ್ನು ಅರ್ಜುನನು ಯುದ್ಧದಲ್ಲಿ ಗೆದ್ದನು ಎಂದು ವೈಶಂಪಾಯರು ಭರತರಾಜನಿಗೆ ಹೇಳಿದರು.

ಎಲ್ಲಾ ಮ್ಲೇಚ್ಛಗಣಗಳನ್ನು ಭೀಮಸೇನದೇವರು ಗೆದ್ದರು.

ಸಾಗರಕುಕ್ಷಿಸ್ಥರಾದ ಮಹಾಕ್ರೂರಿಗಳಾದ ಮ್ಲೇಚ್ಛರನ್ನು ಪಪ್ಲವರನ್ನು, ಬರ್ಬರರನ್ನು, ಕಿರಾತರನ್ನು, ಯವನರನ್ನು, ಶಕರನ್ನು ನಕುಲನು ಗೆದ್ದನು.

ಇದೇ ಕ್ರಮದಲ್ಲಿ ಸಹದೇವನ ದಿಗ್ವಿಜಯವೂ ಕೂಡ ಮಹಾಭಾರತದಲ್ಲಿ ಉಕ್ತವಾಗಿದೆ. ಸಮುದ್ರಕ್ಕೆ ಹೋಗದೆ, ಸಮುದ್ರವನ್ನು ದಾಟದೆ ಆ ಸಾಗರದ ಮಧ್ಯ ಇರುವ ದ್ವೀಪಗಳನ್ನು ಗೆಲ್ಲುವುದು ಹೇಗೆ ಸಾಧ್ಯ . ಆದ್ದರಿಂದ ಸಮುದ್ರಯಾನಗಳಲ್ಲಿರುವ ಶತ್ರುಗಳನ್ನು ನಿಷಿದ್ಧವಲ್ಲ ಎಂದು ಹೇಳಬಹುದೇ ?

ಪಾತಿತ್ಯಕ್ಕೆ ಸಮುದ್ರಯ್ಯಾನವನ್ನು ಕಾರಣವೆಂದು ಪ್ರಮಾಣಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲಾಗಿದೆ. ಈ ಸಮುದ್ರಯಾನವು ಮಹಾಪಾತಕಕ್ಕಿಂತ ಸ್ವಲ್ಪಕಡಿಮೆಯಾಗಿಯೂ ಉಪಪಾತಕಕ್ಕಿಂತಲೂ ಕಿಂಚಿದಧಿಕವೆಂದು ಪರಿಗಣಿಸಿದ್ದಾರೆ. ಇದನ್ನು ಮೀರಿದವರಿಗೆ ಅನಿಷ್ಟವನ್ನು ಹೇಳಿದ್ದಾರೆ. ಇನ್ನೂ ಅನೇಕ ಪ್ರಮಾಣಗಳು ಸಮುದ್ರಯಾನವನ್ನು ನಿಷೇಧಿಸುತ್ತಿವೆ. ಹೀಗಿರುವಾಗ ಒಂದು ಯಾವುದೋ ಒಳ್ಳೆಯ ಉದ್ದೇಶದಿಂದ ಸಮುದ್ರ ಯಾನವನ್ನು

ಮಾಡಬಾರದು ಎಂದಿಲ್ಲವಾದ್ದರಿಂದ ಸದುದ್ದೇಶದಿಂದ ಸಮುದ್ರಯಾನವನ್ನು ಮಾಡಬಹುದು ಎಂದೂ ಅರ್ಥ ಮಾಡುವಂತಿಲ್ಲ. ಆದ್ದರಿಂದ ಕೆಲವು ದೃಷ್ಟಾಂತಗಳ ಪ್ರಾಪ್ತಿಮಾತ್ರದಿಂದ ಈ ನಿಷೇಧವನ್ನು ಅಲ್ಲಗಳೆಯುವುದು ಯೋಗ್ಯವಲ್ಲ. ಇಷ್ಟಾಗಿ ದೊರಕಿದ ದೃಷ್ಟಾಂತಗಳು ಮಹನೀಯರದ್ದಾಗಿದೆ. ಅವರು ಅಪರೋಕ್ಷಜ್ಞಾನಿಗಳು ಆಗಿರುವುದರಿಂದ ಈ ದೋಷ ಅವರಿಗೆ ಬರುವುದಿಲ್ಲ. ಲೌಹಿತ್ಯದೇಶಪರ್ಯಂತ ಭೀಮಸೇನದೇವರು ಪೂರ್ವದಿಕ್ಕಿಗೆ ಹೋಗಿ ದೂತರಿಂದ ಕಪ್ಪಕಾಣಿಕೆಗಳನ್ನು ತರಿಸಿದರೆಂದು ಮಹಾಭಾರತದಲ್ಲಿ ಉಲ್ಲಿಖಿತವಾಗಿದೆ. ಈ ಕಾರಣದಿಂದ ಶ್ರೀಭೀಮಸೇನದೇವರು ಸಮುದ್ರಯಾನವನ್ನು ಮಾಡದೆ ದಿಗ್ವಿಜಯ-ಮಾಡಿದರೆಂತಾಗಲಿ, ಜ್ಞಾನಿಗಳಾದ ತೇಜಸ್ವಿಗಳು ಕೆಲವೊಮ್ಮೆ ಲೋಕನ್ಯಾಯಕ್ಕನುಸಾರವಾಗಿ ಅಧರ್ಮವೆಂದು ತೋರುವ ಕಾರ್ಯಗಳನ್ನು ಮಾಡಿದರೆಂತಾಗಲೀ ... ಹೆ ಮಾಡಬೇಕು. ಅಂತಹ ಕಾರ್ಯಗಳು ನಮಗೆ ಅನುಸರಣೀಯವಲ್ಲ. ಇದೇ ಪ್ರಶ್ನೆಯನ್ನು ಪರೀಕ್ಷಿತನು ಶುಕರನ್ನು ಕೇಳುತ್ತಾನೆ.

ರಾಜೋವಾಚ -

ಸಂಸ್ಥಾಪನಾಯ ಧರ್ಮಸ್ಯ ಪ್ರಶಮಾಯೇತರಸ್ಯ ಚ ।
ಅವತೀರ್ಣೋ ಹಿ ಭಗವಾನ್ ಅಂಶೇನ ಜಗದೀಶ್ವರಃ ।
ಸ ಕಥಂ ಧರ್ಮಸೇತೂನಾಂ ವಕ್ತಾ ಕರ್ತಾಭಿರಕ್ಷಿತಾ ।
ಪ್ರತೀಪಮಾಚರತ್ ಬ್ರಹ್ಮನ್ ಪರದಾರಾಭಿಮರ್ಷಣಮ್ ।
ಆತ್ಮಾರಾಮೋ ಯದುಪತಿಃ ಕೃತವಾನ್ ವೈ ಜುಗುಪ್ಸಿತಮ್ ।
ಕಿಮಭಿಪ್ರಾಯ ಏತಂ ನಃ ಸಂಶಯಂ ಛಿಂಧಿ ಸುವ್ರತ ।

ಶ್ರೀಶುಕೋವಾಚ -

ಧರ್ಮವ್ಯತಿಕ್ರಮೋ ದೃಷ್ಟಃ ಈಶ್ವರಾಣಾಂ ಚ ಸಾಹಸಮ್ ।
ತೇಜೀಯಸಾಂ ನ ದೋಷಾಯ ವಹ್ನೇಃ ಸರ್ವಭುಜೋ ಯಥಾ ।
ನೈತತ್ ಸಮಾಚರೇಜ್ಜಾತು ಮನಸಾಽಪಿ ಹ್ಯನೀಶ್ವರಃ ।
ನಶ್ಯತ್ಯಾಶ್ವಾಚರನ್ ಮೌಢ್ಯಾತ್ ಯಥಾ ರುದ್ರೋಽಪಿಬದ್ವಿಷಮ್ ।
ಈಶ್ವರಾಣಾಂ ವಚಃ ಸತ್ಯಂ ತಥೈವಾಚರಿತಮ್ ಕ್ವಚಿತ್ ।
ತೇಷಾಂ ಯತ್ಸ್ವವತೋ ಯುಕ್ತಂ ಬುದ್ಧಿಮಾನ್ ನೈತದಾಚರೇತ್ ।
ಕುಶಲಾಚರಿತಾನೇಷಾಮಿಹ ಚಾರ್ಥೋ ನ ವಿದ್ಯತೇ ।
ವಿಪರ್ಯಯೇಣ ಚಾನರ್ಥೋ ನಿರಹಂಕಾರಿಣಾಂ ಪ್ರಭೋ ।
ಕಿಮುತಾಖಿಲಸತ್ವಾನಾಂ ತಿರ್ಯಙ್ಮರ್ತ್ಯದಿವೌಕಸಾಮ್ ।
ಈಶಿತುಶ್ಚೇಶಿತವ್ಯಾನಾಂ ಕುಶಲಾಕುಶಲಾನ್ವಯಃ । – ಭಾಗವತ

ಪರೀಕ್ಷಿತ್ ರಾಜನು ಶ್ರೀಕೃಷ್ಣ ಬಾಲಲೀಲೆಗಳನ್ನು, ರಾಸಕ್ರೀಡೆಮುಂತಾದವುಗಳನ್ನು ಶ್ರವಣಮಾಡಿದಮೇಲೆ ಸಂದೇಹಗ್ರಸ್ಥನಾಗುತ್ತಾನೆ. ಜಗತ್ತಿಗೆ ಧಮಪ್ರತಿಷ್ಠಾಪನೆಗಾಗಿ ಅವತರಿಸಿದ ಶ್ರೀಕೃಷ್ಣನು ಶಾಸ್ತ್ರಗಳಿಗೆ ವಿರುದ್ಧವಾಗಿ ಪರಸ್ತ್ರೀಗಮನಮುಂತಾದ ಕಾರ್ಯಗಳನ್ನು ಹೇಗೆ ಮಾಡುತ್ತಾನೆ ? ಎಂದು ಪ್ರಶ್ನಿಸಿದ.

ಆಗ ಶುಕಾಚಾರ್ಯರು ಇದಕ್ಕೆ ಉತ್ತರ ನೀಡುತ್ತಾರೆ. ಸಮರ್ಥರಾದವರು ಕೆಲವೊಮ್ಮೆ ಧರ್ಮವನ್ನು ಮೀರಿ ನಡೆದರೂ ಮಹಾತೇಜಸ್ಕರಾದ್ದರಿಂದ ಅವರಿಗೆ ಅವು ದೋಷಾವಹವಾಗುವುದಿಲ್ಲ. ಹೇಗೆ ಬೆಂಕಿಯು ಯಾವ ಪದಾರ್ಥವನ್ನು ಕಬಳಿಸಿದರೂ ಅದಕ್ಕೆ ದೋಷಬರುವುದಿಲ್ಲವೋ ಹಾಗೆ. ಸಾಮಾನ್ಯ ಜನರು ಮನಸ್ಸಿನಿಂದಲೂ ಒಮ್ಮೆಯೂ ಹಾಗೆ ನಡೆಯಬಾರದು. ಹಾಗೇನಾದರೂ ದೊಡ್ಡವರ ದೃಷ್ಟಾಂತದಿಂದ ಶಾಸ್ತ್ರವಿರುದ್ಧವಾದ ಕಾರ್ಯವನ್ನು ಅಜ್ಞಾನದಿಂದ ಆಚರಿಸಿದರೆ ತತ್ಕ್ಷಣದಲ್ಲಿ ಪತಿತರಾಗುತ್ತಾರೆ. ಮಹರುದ್ರದೇವರು ಹಾಲಾಹಲವಿಷವನ್ನು ಪಾನಮಾಡುವ ಸಾಹಸಕ್ಕೆ ನುಗ್ಗಿ ನೀಲಕಂಠರಾದ ಕಥೆಯೇ ಇದಕ್ಕೆ ಸಾಕ್ಷಿ. ಆದ್ದರಿಂದ ದೊಡ್ಡವರ ಮಾತನ್ನು ಕೇಳಬೇಕು. ಶಾಸ್ತ್ರಗಳಿಗೆ ಅವಿರುದ್ಧವಾದ ದೊಡ್ಡವರ ಆಚರಣೆಯನ್ನು ಮಾತ್ರ ಆಚರಿಸಬೇಕು' ಎಂದು ಉತ್ತರಿಸಿದರು. ಇನ್ನೂ ಮಹನೀಯರ ಶಾಸ್ತ್ರಗಳ ವಿರುದ್ಧಾಚರಣೆಯೇ ಅನುಸರಣೀಯವಲ್ಲವೆಂದಮೇಲೆ ದುಷ್ಟರ ಆಚರಣೆಯನ್ನು ಅನುಸರಿಸಬಾರದೆಂದು ಪ್ರತ್ಯೇಕ ಹೇಳಬೇಕಾಗಿಲ್ಲ. ಇದರಿಂದ ಹನುಮಂತದೇವರು ಸಮುದ್ರೋಲ್ಲಂಘನಮಾಡಿದರೆಂತಲೂ, ಶ್ರೀರಾಮಚಂದ್ರನು ಸಮುದ್ರೋಲ್ಲಂಘನೆ ಮಾಡಿದನೆಂತಲೂ ಆಕ್ಷೇಪಿಸಿ ತಮ್ಮ ಸಮುದ್ರೋಲ್ಲಂಘನೆಯನ್ನು ಸಮರ್ಥಿಸಿಕೊಳ್ಳುವುದು ಖಂಡಿತ ತಪ್ಪೆಂದು ಸ್ಥಾಪಿತವಾಗುತ್ತದೆ. ಆದ್ದರಿಂದ ಶ್ರೀರಾಮಚಂದ್ರ ಹಾಗೂ ಹನುಮದಾದಿಗಳು ದೇವತೆಗಳ ಅವತಾರರಾದ್ದರಿಂದ ಅವರಿಗೆ ದೋಷವಾಗಲಿಲ್ಲ ಎಂಬಿಷ್ಟೇ ಕಾರಣದಿಂದ ಸಾಮಾನ್ಯರಿಗೂ ದೋಷವಾಗುವುದಿಲ್ಲ ಎಂದು ಹೇಳುವುದು ಸಾಧ್ಯವಿಲ್ಲ. ಶಾಸ್ತ್ರವು ಯಾವ ಯಾವ ಜೀವರನ್ನು ಕುರಿತು ವಿಧಿ, ನಿಷೇಧಗಳನ್ನು ಉಪದೇಶಿಸುತ್ತಿವೆಯೋ ಆ ಜೀವರು ಆ ವಿಧಿನಿಯಮಗಳಿಗೆ ಬದ್ಧರಾಗಿ ನಡೆದು ಕೊಳ್ಳಬೇಕು.

ಸಮುದ್ರಯಾನಂ, ಮಾಂಸಸ್ಯ ಭಕ್ಷಣಂ, ಶಸ್ತ್ರಜೀವಿಕಾ ।
ಶೀಧುಪಾನಂ , ಉದೀಚ್ಯಾನಾಂ ಅವಿಗೀತಾನಿ ಧರ್ಮತಃ ॥

ಈ ಮೇಲಿನ ಶ್ಲೋಕವು ಸ್ಮೃತಿಮುಕ್ತಾಫಲ ಎಂಬ ಗ್ರಂಥದಲ್ಲಿ ಉಕ್ತವಾಗಿದೆ. ಸಮುದ್ರಯಾನ, ಮಾಂಸ ಭಕ್ಷಣ, ಶಸ್ತ್ರೋಪಜೀವನ, ಸುರಾಪಾನ, ಇವು ಉತ್ತರದೇಶದವರಿಗೆ ದೋಷವಲ್ಲ, ಧರ್ಮವೇ ಎಂದು ಈ ಶ್ಲೋಕದ ಅರ್ಥ. ಈ ಶ್ಲೋಕವನ್ನು ಪ್ರಮಾಣವೆಂದು ಸ್ವೀಕರಿಸಿದಾಗ ಸಮುದ್ರಯಾನವು ದಾಕ್ಷಿಣಾತ್ಯರಿಗೆ ಮಾತ್ರ ದೋಷಕರ ಎಂದು ಒಪ್ಪಿದಂತಾಗುತ್ತದೆ. ಆದರೆ ಬೋಧಾಯನರು ತಮ್ಮ ನಿರ್ಣಯ ಸೂತ್ರದಲ್ಲಿ ದಾಕ್ಷಿಣಾತ್ಯರಿಗೂ ಮತ್ತು ಔತ್ತರಾತ್ಯರಿಗೂ ಇರುವ ದೇಶಾಚಾರದ ಪ್ರಭೇದವನ್ನು, ಉಲ್ಲೇಖಿಸಿ ಖಂಡಿಸಿರುತ್ತಾರೆ .

ಪಂಚಧಾ ವಿಪ್ರತಿಪತ್ತಿಃ ದಕ್ಷಿಣತಸ್ತಥೋತ್ತರತಃ -1

ಯಾನಿ ದಕ್ಷಿಣತಃ ತಾನಿ ವ್ಯಾಖ್ಯಾಸ್ಯಾಮಃ - 2

ಯಥೈತದನುಪೇತೇನ ಸಹ ಭೋಜನಂ ಸ್ತ್ರಿಯಾ ಸಹ ಭೋಜನಂ ಪರ್ಯುಷಿತಭೋಜನಂ ಮಾತುಲ ಪಿತೃಷ್ವಸೃ ದುಹಿತೃಗಮನಮಿತಿ - 3

ಅಥೋತ್ತರತಃ ಊರ್ಣಾವಿಕ್ರಯಃ ಶೀಧುಪಾನಮುಭಯತೋ ದದ್ಭಿರ್ವ್ಯವಹಾರಃ ಆಯುಧೀಯಕಂ ಸಮುದ್ರಸಂಯಾನಂ (ದ್ವೀಪಾಂತರಗಮನಂ) ಇತಿ

ಇತರದಿತರಸ್ಮಿನ್ ಕುರ್ವನ್ ದುಷ್ಯತೀತರದಿತರಸ್ಮಿನ್ -5

ತತ್ರ ತತ್ರ ದೇಶಪ್ರಾಮಾಣ್ಯಮೇವ ಸ್ಯಾತ್ -6

ಮಿಥ್ಯೈತದಿತಿ ಗೌತಮಃ - 7- ಉಭಯಂ ಚೈವ ನಾದ್ರಿಯೇತ -8

ಶಿಷ್ಟಸ್ಮೃತಿವಿರೋಧದರ್ಶನಾತ್ ಶಿಷ್ಟಾಗಮವಿರೋಧದರ್ಶನಾಚ್ಚ - 9

ಯಾವುದೇ ದೇಶಾಚಾರವು ಶಾಸ್ತ್ರವಿರುದ್ಧವಾದರೆ ಅದು ಅನುಷ್ಠಾನಯೋಗ್ಯವಲ್ಲ. ಸೋದರ ಮಾವನಮಗಳನ್ನು ಲಗ್ನ ಮಾಡಿಕೊಳ್ಳುವುದೇ ಮುಂತಾದ ಕೆಲವು ದೇಶಾಚಾರಗಳು ಕೆಲಪ್ರಮಾಣಗಳಿಗೆ ವಿರುದ್ಧವಾದರೂ, ಪ್ರಬಲ ಪ್ರಮಾಣಗಳ ಸಮ್ಮತಿ ಇರುವುದರಿಂದ ಶಿಷ್ಟಾಚಾರದಲ್ಲೂ ಕಂಡು ಬಂದಿರುವುದರಿಂದ ಪ್ರಾಮಾಣಿಕ ಎಂದೇ ಒಪ್ಪಬೇಕಾಗುತ್ತದೆ.

ಯಾವ ದೇಶಾಚಾರವನ್ನು ಅನೇಕ ಋಷಿಗಳು ಖಂಡಿಸುತ್ತಾರೋ, ಆ ದೇಶಾಚಾರಕ್ಕೆ ಅನುಕೂಲಕರ ಪ್ರಮಾಣಗಳೂ ಸಿಗುವುದಿಲ್ಲವೋ ಅಂತಹಾ ದೇಶಾಚಾರವನ್ನು ಬಿಡಲೇ ಬೇಕಾಗುತ್ತದೆ.

ಅದ್ದರಿಂದ ಸಮುದ್ರಯಾನಂ ಎಂಬ ಶ್ಲೋಕಕ್ಕೆ ಯಥಾಶ್ರುತ ಅರ್ಥವನ್ನು ಗ್ರಹಿಸದೇ ಸಾವಕಾಶ ಎನ್ನಬೇಕು ಎನ್ನುವ ವಾದವು, 'ಭರಣೀಯುಕ್ತ ಏಕಾದಶೀದಿನ ಉಪವಾಸ ಮಾಡಬಾರದೆಂಬ ಶಾಸ್ತ್ರವಾಕ್ಯಕ್ಕೆ ಸಮಾನವೆಂದು, ಅಪ್ರಮಾಣವೆಂದೂ ಹೇಳಬೇಕಾಗುತ್ತದೆ.

## ಪ್ರಾಯಶ್ಚಿತ್ತ ವಿಚಾರ

ಬೋಧಾಯನ ಧರ್ಮಸೂತ್ರದಲ್ಲಿ ಸಮುದ್ರಯಾನಕ್ಕೆ ಪ್ರಾಯಶ್ಚಿತ್ತವನ್ನು ಹೇಳಲಾಗಿದೆ.

ಏಷಾಂ ಅನ್ಯತಮತ್ಕೃತ್ವಾ ಚತುರ್ಥಕಾಲಾ ಮಿತಭೋಜಿನಸ್ಸ್ಯುಃ ಸವನಾನುಕಲ್ಪಮ್ ।
ಸ್ಥಾನಾಸನಾಭ್ಯಾಂ ವಿಹರಂತ ಏತೇ ತ್ರಿಭಿರ್ವರ್ಷೈಸತಿದಪಹಂತಿ ಪಾಪಮ್ ॥

ನಾಲ್ಕು ಭೋಜನಕ್ಕೆ ಬದಲಾಗಿ ಒಂದೇ ಭೋಜನವನ್ನು ಮಿತವಾಗಿ ಮಾಡುತ್ತಾ ಮೂರು ಕಾಲದಲ್ಲೂ ಸ್ನಾನಮಾಡುತ್ತಾ ಮಲಗಿ ನಿದ್ರಿಸದೆ ನಿಂತಿರಬೇಕು ಅಥವಾ ಕುಳಿತಿರಬೇಕು, ಹೀಗೆ ಮೂರು ವರ್ಷಕಾಲ ಇರಬೇಕು. ಇಷ್ಟುಮಾಡಿದವನು ಸ್ವಕರ್ಮಕ್ಕೆ ಅಧಿಕಾರಿಯಾಗುತ್ತಾನೆ. ಇದೊಂದು ರೀತಿ ಅಸಂಭಾವಿತಪ್ರಾಯಶ್ಚಿತ್ತವೇ.

ನಾರಾಯಣಸ್ಮೃತಿ ಎಂಬ ಗ್ರಂಥದಲ್ಲಿ ಸಮುದ್ರಯಾನಮಾಡಿದರೆ ಗಂಗಾಸ್ನಾನ ಮುಂತಾದುವು ಅಥವಾ ಸರ್ವಸ್ವದಾನವನ್ನು ಮಾಡಬೇಕು ಎಂದು ಪ್ರಾಯಶ್ಚಿತ್ತವನ್ನು ಹೇಳಲಾಗಿದೆ. ಇಂತಹವರು ಶಿಷ್ಟಸಂವ್ಯವಹಾರದಲ್ಲಿ ಭಾಗಿಯಾಗುವಂತಿಲ್ಲ. ಶಿಷ್ಟಸಂವ್ಯವಹಾರವೆಂದರೆ ಸಹಪಂಕ್ತಿಭೋಜನ, ಕನ್ಯಾಸಂಬಂಧ, ಅಧ್ಯಯನ ಅಧ್ಯಾಪನಾದಿರೂಪವ್ಯವಹಾರವೇ ಆಗಿದೆ . ಇದನ್ನು ಹೇಳುವ ನಾರಾಯಣ ಸ್ಮೃತಿಯಲ್ಲಿ.

ಶೃಣು ನಾರಾಯಣ ಶ್ರೀಮನ್ ಗದತೋ ಮಮ ವಿಸ್ತರಾತ್ ।
ಗಂಗಾಸ್ನಾನಂ ವರ್ಷಮಾತ್ರಂ ಮಾಸಂ ಸೇತುನಿಮಜ್ಜನಮ್ ।
ಸಾಂಗಂ ಚ ವಿಧಿವತ್ಕೃತ್ವಾ ವ್ಯವಹಾರ್ಯೋ ಭವೇದಿಹ ।
ಭವೇತ್ಸ್ವಕರ್ಮಮಾತ್ರಸ್ಯ ಭವಿತಾ ತ್ವರ್ಹತಾ ದ್ವಿಜ ।
ಪರಕರ್ಮಣಿ ನೈವಾರ್ಹಃ ಭವೇದೇವ ನ ಸಂಶಯಃ ॥ 6 ॥
ತಸ್ಮಾದಿಮಾನ್ ಕಲಿಯುಗೇ ವರ್ಜ್ಯಾನಷ್ಟೌ ಬ್ರುವಂತಿ ಹಿ ।
ಅಸಾಧ್ಯತ್ವಾತ್ಕಲೌ ಕಾಲೇ ದ್ರವ್ಯವ್ಯಯವಿಶೇಷತಃ । 7 ।
ಯದಿ ಸರ್ವಸ್ವದಾನೇನ ಚಿತ್ತಂ ಚರಿತುಮಿಚ್ಛತಿ ।
ತದಾऽಸೌ ಸರ್ವಕರ್ಮಾರ್ಹೋ ಭವೇದೇವ ನ ಸಂಶಯಃ ॥ 8 ॥
ತದದ್ಯ ತವ ವಕ್ಷ್ಯಾಮಿ ರಹಸ್ಯಮಿದಮುತ್ತಮಮ್ ।
ಯದಾ ಪ್ರವೃತ್ತಸ್ತ್ವೇಸ್ಮಿನ್ ತದ್ದಿನಂ ಪರಿಗಣ್ಯ ಚ । 9 ।
ಚಾಂದ್ರಾಯಣದ್ವಯಂ ನಿತ್ಯಂ ಕರ್ತವ್ಯಮವಿಶಂಕಯಾ ।
ಪೂರ್ವೋತ್ತರಾಂಗಸಂಯುಕ್ತಂ ಅಬ್ಲಿಂಗಶತಮನ್ತ್ರಿತಮ್ । 10 ।
ಸಹಸ್ರಕಲಶಸ್ನಾನಂ ಪಂಚವಾರುಣಹೋಮಕಮ್ ।
ಕೂಷ್ಮಾಂಡಗಣಹೋಮಾನಾಂ ಶತಂ ಪಾಹಿ ತ್ರಯೋದಶೈಃ । 11 ।
ಶತಂ ತು ವಿರಜಾಹೋಮಂ ಗಾಯತ್ರೀಶತಹೋಮಕಮ್ ।
ತಿಳಹೋಮಸಹಸ್ರೈಶ್ಚ ಗರ್ಭಂ ಚ ವಟಭೂಗವಾಮ್ । 12 ।
ಮಜ್ಜನಂ ಗೋಮಯಹ್ರದೇ ಗೋದಾನಂ ದ್ವಾದಶಾಚರೇತ್ ।
ದಶದಾನಂ ಭೂರಿದಾನಂ ಸಹಸ್ರಬ್ರಹ್ಮಭೋಜನಮ್ ॥ 13 ॥
ಏವಮಾದಿ ಯಥಾಶಾಸ್ತ್ರಂ ಧನವ್ಯಯಮಚಿಂತ್ಯ ತು ।
ಸಂತುಷ್ಟಚಿತ್ತಃ ಕೃತ್ವಾ (ಸತತಂ) ಶುದ್ಧಿಮಾಪ್ನೋತ್ಯಸಂಶಯಃ ॥ 14 ॥
ಸ್ವಕರ್ಮಪರಕರ್ಮಾರ್ಹೋ ಭವೇದೇವ ನ ಸಂಶಯಃ ।

### ಧನಹೀನರಿಗೆ ಪ್ರಾಯಶ್ಚಿತ್ತ

ನಾರಾಯಣ ಉವಾಚ –
ಭಗವನ್ ಸರ್ವಧರ್ಮಜ್ಞ ಶರಣಾಗತವತ್ಸಲ ।
ಅಕಿಂಚನಾನಾಮಾರ್ತಾನಾಂ ಕಲಿವರ್ಜ್ಯಕೃತಾಂ ನೃಣಾಮ್ ।
ಕಥಂ ನಿಷ್ಕೃತಿರಾದಿಷ್ಟಾ ವದ ಮೇ ಶಿಷ್ಯವತ್ಸಲ ॥ 1 ॥

ದುರ್ವಾಸಾ ಉವಾಚ –

ತಾತ ತೇ ಕಥಯಾಮ್ಯದ್ಯ ಶ್ರುಣು ವಾತ್ಸಲ್ಯಗೌರವಾತ್ । 2 ।
ಅತ್ಯಂತಾತಿರ್ತೋ ಯದಿ ಬ್ರಹ್ಮನ್ ಅಧನಃ ಕಲಿವರ್ಜ್ಯಕೃತ್ ।
ಶರಣಂ ಯದಿ ಸಂಪ್ರಾಪ್ತಃ ಪ್ರಾಯಶ್ಚಿತ್ತಮಿದಂ ವದೇತ್ । 3 ।
ಸಶಿಖಂ ವಪನಂ ಕೃತ್ವಾ ನಿತ್ಯಕರ್ಮಪರಾಯಣಃ ।
ಪುಣ್ಯತೀರ್ಥೇ ಹ್ರದೇ ವಾಽಪಿ ಪುಷ್ಕರಿಣ್ಯಾಮಥಾಽಪಿ ವಾ ॥ 4 ॥
ಆಕಂಠಜಲಸಮ್ಮಗ್ನಃ ಪ್ರಾಙ್ಮುಖಸ್ತ್ವಘಮರ್ಷಣಮ್ ।
ಶಿರಸ್ಯಂಜಲಿಮಾಧಾಯ ಜಪ್ತ್ವಾ ಸ್ನಾನಂ ಸಮಾಚರೇತ್ ॥ 5 ॥
ಪುನರ್ಜಪ್ತ್ವಾ ಪುನಸ್ಸ್ನಾತ್ವಾ ಪುನರ್ಜಪಮಥಾಚರೇತ್ ।
ಏವಂ ಮಧ್ಯಾಹ್ನಪರ್ಯಂತ ಪ್ರಾಙ್ ಮುಖಸ್ನಾನಮಾಚರೇತ್ ॥ 6 ॥
ಮಾಧ್ಯಾಹ್ನಿಕಂ ತತಃ ಕೃತ್ವಾ ಸಮಾರಾಧ್ಯೇಷ್ಟದೇವತಾಮ್ ।
ತತಃ ಪ್ರತ್ಯಙ್ಮುಖೋ ಭೂತ್ವಾ ಪೂರ್ವವತ್ಸ್ನಾನಮಾಚರೇತ್ । 7 ।
ಸಾಯಾಹ್ನೇ ಸಮನುಪ್ರಾಪ್ತೇ ತಟಮುತ್ತೀರ್ಯ ವಾಗ್ಯತಃ ॥
ನ ಸಂಮೃಜೇಚ್ಛರೀರಾಣಿ ವಾಸಸಾ ವಾಽಪಿ ಪಾಣಿನಾ ॥ 8 ॥
ಪಲಾಷ್ಟಕಪ್ರಮಾಣೇನ ತಂಡುಲೇನ ಹತಿಃ ಪಚೇತ್ ।
ಗೋಮೂತ್ರೇ ವಿನಿವೇದ್ಯೈವ ಹರಯೇ ಪರಮಾತ್ಮನೇ ॥ 9 ॥
ತದೇವ ಭುಕ್ತ್ವಾ ಸಾಯಾಹ್ನೇ ಸ್ವಪೇದ್ವೈ ದಕ್ಷಿಣಾಶಿರಃ ।
ಏವಂ ಷಣ್ಮಾಸಕೃದ್ವಿಪ್ರಃ ಪೂರ್ವತಚ್ಛುದ್ಧಿಮಾಪ್ನುಯಾತ್ ॥ 10 ॥
ತತೋ ಗಂಗಾಜಲೇ ಸ್ನಾತ್ವಾ ಸೇತುದರ್ಶನಮೇವ ವಾ ।
ಕೃತ್ವಾ ತತಃ ಪುನಃ ಕರ್ಮ ಕೃತ್ವಾ ಶುದ್ಧಿಮವಾಪ್ನುಯಾತ್ ॥ 11 ॥
ಸ್ವಕರ್ಮಪರಕರ್ಮಾರ್ಹೋ ಭವೇದೇವ ನ ಸಂಶಯಃ ।
ಏವಂ ಸಮ್ಯಕ್ ಸಮಾದಿಷ್ಟಂ ಶ್ರುತ್ವಾ ನಾರಾಯಣೋ ಮುನಿಃ ॥ 12 ॥
ವಿಚ್ಛಿನ್ನಸಂಶಯೋ ಭೂತ್ವಾ ಪರಮಾನಂದನಿರ್ಭರಃ ।
ಮೇರುಪೃಷ್ಠಮುಪಾಗಮ್ಯ ತಪಶ್ಚರ್ತುಂ ಯಯೌ ಮುನಿಃ ॥ 13 ॥

1. ಒಂದು ವರ್ಷಪರ್ಯಂತ ಗಂಗಾಸ್ನಾನ. 2. ಒಂದು ತಿಂಗಳು ಸೇತುಸ್ನಾನ.. 3. ಇಷ್ಟುಮಾಡಿದಾಗ ಸ್ವಕರ್ಮಾರ್ಹತೆ ಬಂದರೂ ಪರಕರ್ಮಕ್ಕೆ ಅರ್ಹರಾಗುವುದಿಲ್ಲ ಆದ್ದರಿಂದ ಸಮುದ್ರಯಾನವೇ ಮುಂತಾದ ಎಂಟು ಅಧರ್ಮಗಳನ್ನು ಕಲಿಯುಗದಲ್ಲಿ ವರ್ಜ್ಯವೆಂದು ಹೇಳಿರುತ್ತಾರೆ. ಕಲಿಯುಗದಲ್ಲಿ ಪ್ರಾಯಶ್ಚಿತ್ತಕರ ಅನುಷ್ಠಾನವು ಅಸಾಧ್ಯವಾಗಿರುವುದೇ ಇದಕ್ಕೆ ಮುಖ್ಯ ಕಾರಣ ಒಂದು ವೇಳೆ ಈ ಅಪರಾಧಗಳನ್ನು ಮಾಡಿದವನು ಒಂದು ಬಿಡಿಗಾಸನ್ನು ತನ್ನಲ್ಲಿ ಇಟ್ಟುಕೊಳ್ಳದೇ ಸರ್ವಸ್ವವನ್ನು ದಾನುಮಾಡುತ್ತಾನೆಂದಾದರೆ ಇವನು ಸರ್ವಕರ್ಮಾರ್ಹನಾದಾನು.

ಎಂದು ಪುರುಷನು ಪಶ್ಚಾತ್ತಪ್ತನಾಗುತ್ತಾನೋ ಅಂದಿನಿಂದ ಎರಡು ಚಾಂದ್ರಾಯಣವನ್ನು ಶಂಕೆಯಿಲ್ಲದೇ ಮಾಡಬೇಕು ಆ ಚಾಂದ್ರಯಣವ್ರತವು ಸಾಂಗವಾಗಿರಬೇಕು. ಆಪಃ ಎಂದಾರಂಭಿಸುವ ಮಂತ್ರ ಹೇಳುತ್ತಾ ನೂರು ಮಂತ್ರಗಳಿಂದ ಸ್ನಾನ ಆಚರಿಸಬೇಕು ಸಾವಿರ ಕಲಶಸ್ನಾನವನ್ನು, ಐದು ವಾರುಣಹೋಮವನ್ನು, ನೂರು ಕೂಷ್ಮಾಂಡಹೋಮಗಳನ್ನು, ನೂರು ಗಣಹೋಮವನ್ನು, ಪಾಹಿತ್ರಯೋದಶ ಮಂತ್ರಗಳಿಂದ ನೂರು ಹೋಮವನ್ನು ನೂರು ವಿರಜಾಹೋಮವನ್ನು, ನೂರು ಗಾಯತ್ರಿಹೋಮವನ್ನು, ಸಾವಿರ ತಿಲಹೋಮವನ್ನು, ವಟಗರ್ಭ, ಭೂಗರ್ಭ, ಗೋಗರ್ಭಶಾಂತಿಯನ್ನು ಹನ್ನೆರಡು ಗೋಮಯಮಡುವಿನ - ಸ್ನಾನವನ್ನು, ಹನ್ನೆರಡು ಗೋದಾನವನ್ನು, ದಶದಾನವನ್ನು, ಭೂರಿದಾನವನ್ನು, ಸಹಸ್ರಬ್ರಾಹ್ಮಣಭೋಜನವನ್ನು ಇವೇ ಮುಂತಾದ ಪ್ರಾಯಶ್ಚಿತ್ತಗಳನ್ನು ಮನಃಪ್ರಶಸ್ತವಾಗುವತನಕ ಆಚರಿಸಬೇಕು. ದ್ರವ್ಯವ್ಯಯವನ್ನು, ದೈಹಿಕಶ್ರಮವನ್ನು ಕುರಿತು ಚಿಂತಿಸಬಾರದು. ಹೀಗೆ ಮಾಡಿದಲ್ಲಿ ಸರ್ವಕರ್ಮಾರ್ಹನಾಗುತ್ತಾನೆ.

ಮುಂದಿನ ಅಧ್ಯಾಯದಲ್ಲಿ ಶ್ರೀನಾರಾಯಣನ ಪ್ರಶ್ನೆಗೆ ಅನುಸಾರವಾಗಿ ದೂರ್ವಾಸರು ದರಿದ್ರರಿಗೆ ಪ್ರಾಯಶ್ಚಿತ್ತವನ್ನು ಹೇಳುತ್ತಾರೆ. ಶಿಖಾಸಮೇತ ವಪನಮಾಡಿಸಿಕೊಂಡು, ನಿತ್ಯಕರ್ಮದಲ್ಲಿ ಆಸಕ್ತನಾಗಿ ಪುಣ್ಯತೀರ್ಥದಲ್ಲಿ, ಮಡುವಿನಲ್ಲಿ, ಅಥವಾ ಪುಷ್ಕರಣಿಯಲ್ಲಿ ಕಂಠಪರ್ಯಂತ ನೀರಿನಲ್ಲಿ ಮುಳುಗಿ ಮಧ್ಯಾಹ್ನದ ತನಕ ಪ್ರಾಙ್ಮುಖ (ಪೂರ್ವದಿಕ್ಕಿಗೆ) ಮಾಡಿ ಎರಡು ಕೈಗಳನ್ನು ತಲೆಯಮೇಲಿಟ್ಟು ಕೊಂಡು ಅಘಮರ್ಷಣ ಮಂತ್ರವನ್ನು ಜಪಿಸಬೇಕು. ಪ್ರತಿಯೊಂದು ಮಂತ್ರಜಪದ ನಂತರವೂ ಸ್ನಾನ ಮಾಡಬೇಕು. ಮತ್ತು ಪುನಃ ಜಪಮಾಡಿ ಪುನಃ ಸ್ನಾನಮಾಡುತ್ತಾ ಸೂರ್ಯನೆತ್ತಿಗೆ ಬರುವ ಪರ್ಯಂತ ಸ್ನಾನ ಜಪಗಳನ್ನು ಮಾಡಬೇಕು. ಆಮೇಲೆ ಹೊರಗೆ ಬಂದು ಮಾಧ್ಯಾಹ್ನಿಕೆಯನ್ನು, ಇಷ್ಟದೇವತಾ ಪೂಜೆಯನ್ನು ಮಾಡಿ ಪಶ್ಚಿಮಾಭಿಮುಖವಾಗಿ ಸ್ನಾನಮಾಡಬೇಕು. ಕಂಠಪರ್ಯಂತ ನೀರಿನಲ್ಲಿ ಮುಳುಗಿ ಅಘಮರ್ಷಣ ಜಪ, ಸ್ನಾನ ಮತ್ತೆ ಜಪ ಹೀಗೆ ಸಾಯಂಕಾಲಪರ್ಯಂತ ಮಾಡಬೇಕು. ಸಾಯಂಕಾಲದಲ್ಲಿ ತೀರಕ್ಕೆ ಬಂದು ವಸ್ತ್ರದಿಂದಲಾಗಲಿ, ಕೈಗಳಿಂದಲಾಗಲಿ ನೀರನ್ನು ಒರೆಸಿಕೊಳ್ಳದೆ ಇರಬೇಕು. ಎಂಟು ಫಲಪ್ರಮಾಣ (ಒಂದು ಫಲ = 11ಗ್ರಾಂ)ದ ತಂಡುಲದಿಂದ ಗೋಮೂತ್ರದಲ್ಲಿ ಅನ್ನ ಮಾಡಬೇಕು. ಇದನ್ನು ಪರಮಾತ್ಮನಿಗೆ ನಿವೇದನೆ ಮಾಡಿ ಉಂಡು ದಕ್ಷಿಣಕ್ಕೆ ತಲೆಮಾಡಿ ಮಲಗಬೇಕು. ಹೀಗೆ ಆರುತಿಂಗಳಕಾಲ ತಪ್ಪದೇ ಮಾಡಿದರೆ ಪುರುಷ ಶುದ್ಧನಾಗುತ್ತಾನೆ. ಆನಂತರ ಗಂಗೆಯಲ್ಲಿ ಸ್ನಾನಮಾಡಿ ಸೇತು ದರ್ಶನವನ್ನು ಮಾಡಿದರೆ ಪೂರ್ಣಶುದ್ಧಿಯನ್ನು ಪಡೆಯುತ್ತಾನೆ. ಇದು ನಾರಾಯಣಸ್ಮೃತಿಯ ಅಭಿಪ್ರಾಯ. ಕಲಿಯುಗದಲ್ಲಿ ಈ ಕ್ರಮದ ಪ್ರಾಯಶ್ಚಿತ್ತಾನುಷ್ಠಾನವು ಪ್ರಾಯಃ ಅಶಕ್ಯ 'ಆದ್ದರಿಂದಲೇ ನಮ್ಮ ಹಿರಿಯರು ಪ್ರಾಯಶ್ಚಿತ್ತವೇ ಇಲ್ಲ ಎಂದು ಹೇಳಿರು-ತ್ತಾರೆ. ಕರ್ಮಣ್ಯ ಭೂಮಿಯಲ್ಲಿಯೇ ಕೆಲವು ದೇಶಗಳು ನಿಷಿದ್ಧವು ತೀರ್ಥಯಾತ್ರೆಯ ಉದ್ದೇಶವನ್ನು ಬಿಟ್ಟು ಬೇರೆ ಕಾರಣದಿಂದ ಈ ದೇಶಗಳಿಗೆ ಹೋದ ಆಹಿತಾಗ್ನಿಗೆ (ಅಗ್ನಿಹೋತ್ರಿ ಇಟ್ಟವರು) ವೈಶ್ವಾನರಇಷ್ಟಿಯು ಪ್ರಾಯಶ್ಚಿತ್ತವೆಂದು, ಅನಾಹಿತಾಗ್ನಿಗೆ ಚಾಂದ್ರಯಣ ಮುಂತಾದವು

ಪ್ರಾಯಶ್ಚಿತ್ತ. ಈ ಎಲ್ಲಾ ಪ್ರಾಯಶ್ಚಿತ್ತಗಳೂ ಆಕಸ್ಮಿಕವಾಗಿ ದುಷ್ಕರ್ಮ ಮಾಡಿದವರಿಗೆ ಮಾತ್ರ. ಮತ್ತು ಪಶ್ಚಾತ್ತಾಪವು ಇರಬೇಕು. ಗುರು- ಹಿರಿಯರಲ್ಲಿ ಶಾಸ್ತ್ರಗಳಲ್ಲಿ ಶ್ರದ್ಧಾಭಕ್ತಿ ಇರಬೇಕು.

ಆದ್ದರಿಂದ ಶಿಷ್ಟರಾದ ಜ್ಞಾನಿಗಳ ಸಂಪ್ರದಾಯಪರಂಪರಾಗತವಾದ ಸದಾಚಾರ ಗುರುಹಿರಿಯರು ತಂದೆತಾಯಿಗಳು ಇವರ ಮಾತನ್ನು ಉಲ್ಲಂಘಿಸಿ ಸ್ವೇಚ್ಛೆಯಿಂದ ವರ್ತಿಸುವವರು ನಿಂದ್ಯರಾಗುತ್ತಾರೆ. ವಿದೇಶಗಮನವಾಗಲಿ ಸಮುದ್ರೋಲ್ಲಂಘನವಾಗಲೀ ಪ್ರತ್ಯೇಕವಾಗಿಯೇ ಶಾಸ್ತ್ರನಿಷಿದ್ಧ . ಈ ವಿದೇಶಗಳು ಅಕರ್ಮಭೂಮಿಯು, ಪಾಪಭೂಮಿಯೂ ಆಗಿರುತ್ತದೆ . ಪೂರ್ವದಲ್ಲಿ ಹೇಳಿದಂತೆ ಸ್ವರ್ಗಾಪವರ್ಗ ಪ್ರತಿಬಂಧಕವಾದ ಪಾಪಗಳನ್ನು ಶ್ರೀಮುಖ್ಯಪ್ರಾಣ-ದೇವರು ಈ ದೇಶಗಳಲ್ಲಿ ಹಾಗೂ ಜನರಲ್ಲಿ ಹಾಕಿದ್ದು ಅಲ್ಲಿ ಹುಟ್ಟುವ, ಇರುವ, ಹಾಗೂ ಇಲ್ಲಿಂದ ಅಲ್ಲಿಗೆ ಹೋಗುವ ಜನರಿಗೆ ಈ ಪಾಪದ ಸಂಬಂಧವು ಆಗುತ್ತದೆ. ಇದರಿಂದ ತಪ್ಪಿಸಿಕೊಳ್ಳುವುದು ಬಹುಕಷ್ಟ. ಈ ದುಷ್ಕರ್ಮಗಳನ್ನು ಮಾಡಿದವರು ಸಂಸ್ಕಾರಹೀನರಂತೆ ವ್ರಾತ್ಯರು, ಕರ್ಮಭ್ರಷ್ಟರು, ಪತಿತರು ಆಗುತ್ತಾರೆ .

ಪತಿತರಿಗೆ ವರ್ಣಾಶ್ರಮೋಚಿತ ಕರ್ಮಗಳಲ್ಲಿ ಅಧಿಕಾರವಿರುವುದಿಲ್ಲ . ಹೀಗಿರುವಾಗ ಈ ಘೋರಕಲಿಯುಗದಲ್ಲಿ ಸಾಮಾನ್ಯಜನರಂತೆ ಸನ್ಯಾಸಿಗಳು, ಪೀಠಾಧಿಪತಿಗಳು ದುಡ್ಡು ಕೀರ್ತಿ ಪ್ರತಿಷ್ಠಾ ಆಮಿಶದಿಂದ ಶಾಸ್ತ್ರಮರ್ಯಾದೆಯನ್ನು ಉಲ್ಲಂಘಿಸಿ ಸ್ವಧರ್ಮವನ್ನು ಸಹ ಪರಿತ್ಯಜಿಸಿ ಈ ವಿದೇಶಗಮನಾದಿ ಘೋರಪಾಪಗಳನ್ನು ಮಾಡುತ್ತಿದ್ದಾರೆ . ಧರ್ಮ ಉಪದೇಶಮಾಡುವವರೇ ಧರ್ಮಪ್ರತಿಷ್ಠಾಪನಾ ಪೀಠದಲ್ಲಿರುವವರೇ ಹೀಗೆ ಧರ್ಮೋಲ್ಲಂಘನ ಮಾಡಿದರೆ ಸಾಮಾನ್ಯರ ಧರ್ಮಸಂರಕ್ಷಣೆ ಹೇಗೆ ಸಾಧ್ಯ. ಕರುಣಾಳು ಆದ ಪರಮಾತ್ಮನು ಇಂತಹ ಕಲಿಯುಗದಲ್ಲಿ ಬಂದ ಸಾತ್ವಿಕಸಜ್ಜನರಿಗೆ ಧರ್ಮಾನುಷ್ಠಾನದಲ್ಲಿ ಶ್ರದ್ಧೆ, ಭಕ್ತಿ ಮತ್ತು ಶಕ್ತಿಗಳನ್ನು ಕೊಟ್ಟು ಸಂರಕ್ಷಿಸಲಿ ಎಂದು ಪ್ರಾರ್ಥಿಸುತ್ತೇವೆ .

ಶ್ರೀನಿವಾಸಗುರೋಃ ರಮ್ಯಾ ಚರಣಾಂಬೋರೋಹಸ್ಮೃತಿಃ
ಮಾತಾ ಕೃತೇರ್ಭವತ್ಯಸ್ಯಾಃ ಕೇವಲಂ ಲೇಖಕಾವಯಮ್ ॥

ನಮ್ಮ ಗುರುಗಳಾದ ಪಂಡಿತರಾಜ ಜಾಲಿಹಾಳ ಶ್ರೀನಿವಾಸಾಚಾರ್ಯರ ಪಾದಕಮಲಗಳ ಸ್ಮರಣೆಯೇ ಈ ಗ್ರಂಥದ ಜನನೀ. ನಾವು ಕೇವಲ ಲೇಖನಿ ಅಷ್ಟೆ.

ಈ ಕನ್ನಡಾನುವಾದದಿಂದ ಅಸ್ಮದ್ಗುರ್ವಂತರ್ಗತ ಸಕಲಗುರ್ವಂತರ್ಗತ ಭಾರತೀರಮಣ-
ಮುಖ್ಯಪ್ರಾಣಾಂತರ್ಗತ ಮಧ್ವವಲ್ಲಭ ಶ್ರೀಕೃಷ್ಣಾಭಿನ್ನಲಕ್ಷ್ಮೀಹಯಗ್ರೀವದೇವರು
ಸಂಪ್ರೀತರಾಗಲಿ.

॥ ಶ್ರೀಕೃಷ್ಣಾರ್ಪಣಮಸ್ತು ॥

## ಆಕರಗ್ರಂಥಗಳು

1.ಸ್ಮೃತಿರತ್ನಾಕರ, 2.ಸ್ಮೃತಿಸಾರ, 3. ನಿರ್ಣಯಸಿಂಧು, 4. ಪರಾಶರಸ್ಮೃತಿ ಮಾಧವೀಯ, 5. ಕಾಲಸಿದ್ಧಾಂತನಿರ್ಣಯ, 6. ಸ್ಮೃತಿಮುಕ್ತಾಫಲ, 7. ಶಾತಾತಪ ಧರ್ಮಶಾಸ್ತ್ರ 8. ಧರ್ಮಾರ್ಣವ, 9. ಯತಿಧರ್ಮನಿರ್ಣಯ, 10. ಯತಿಧರ್ಮ ಪ್ರಕಾಶ, 11. ಪ್ರಾಯಶ್ಚಿತ್ತೇಂದುಶೇಖರ, 12. ಧರ್ಮಶಾಸ್ತ್ರಪ್ರಸಾರ, 13.ಪೈಠೀನಸೀ ಸ್ಮೃತಿ, 14. ಕೃತ್ಯಕಲ್ಪತರು, 15. ವಸಿಷ್ಠಧರ್ಮಸೂತ್ರ, 16.ಬುಧಸ್ಮೃತಿ, 17.ಶಂಖ ಸ್ಮೃತಿ, 18. ಲಿಖಿತಸ್ಮೃತಿ, 19. ಧರ್ಮತತ್ವನಿರ್ಣಯ, 20. ವೀರಮಿತ್ರೋದಯ, 21.ಸ್ಮೃತ್ಯರ್ಥಸಾರ, 22.ಸಮುದ್ರಯಾನಮೀಮಾಂಸಾ, 23.ಶಂಭುಭಟ್ಟೀಯ ಮಂತ್ರಾಧಿಕರಣ = ಭಾಟ್ಟದೀಪಿಕಾ, 24. ಅಬ್ಧಿನೌಯಾನಮೀಮಾಂಸಾ, 25.ಮನು ಸ್ಮೃತಿ, 26. ಲಘುಹಾರೀತಸ್ಮೃತಿ, 27. ನಾರಾಯಣಸ್ಮೃತಿ, 28. ಬೃಹತ್ಪಾರಾಶರ-ಸ್ಮೃತಿ, 29. ಯಾಜ್ಞವಲ್ಕ್ಯಸ್ಮೃತಿ, 30. ಬೋಧಾಯನಧರ್ಮಸೂತ್ರ, 31.ಗೌತಮ-ಧರ್ಮಸೂತ್ರ, 32.ಭಾಗವತ, 33.ಶ್ರೀಮದಾನಂದತೀರ್ಥಭಗವತ್ಪಾದಾಚಾರ್ಯ ವಿರಚಿತ ಭಾಗವತತಾತ್ಪರ್ಯ, 34. ಸ್ಕಂದಪುರಾಣ, 35.ಸತ್ಯಧರ್ಮೀಯ ರಾಮಾಯಣವ್ಯಾಖ್ಯಾನ, 36. ಸುಧೀಂದ್ರತೀರ್ಥವಿರಚಿತ ಭಾಗವತವ್ಯಾಖ್ಯಾನ, 37.ಛಲಾರೀಯ ಏಕಾದಶಸ್ಕಂಧ ವ್ಯಾಖ್ಯಾನ, 38. ಮಾರ್ಕಂಡೇಯಪುರಾಣ, 39.ವಾಯುಪುರಾಣ, 40.ಬೃಹನ್ನಾರದೀಯಪುರಾಣ, 41.ಮಣಿಮಂಜರಿ, 42.ಉಶನಸಸ್ಮೃತಿ, 43. ಸುಮಧ್ವವಿಜಯ, 44.ಲೌಗಾಕ್ಷಿಸ್ಮೃತಿ, 45.ದೇವಲ ಸ್ಮೃತಿ. 46.ಕಾಣ್ವಸ್ಮೃತಿ, 47. ಆದಿಪುರಾಣ, 48. ಆದಿತ್ಯಪುರಾಣ, 49.ಹೇಮಾದ್ರಿ, 50. ಸ್ಮೃತಿಚಂದ್ರಿಕಾ, 51.ಭಗವದ್ಗೀತಾ, 52.ವಿಷ್ಣುಪುರಾಣ, 53.ವಿಷ್ಣುಸ್ಮೃತಿ, 54.ಭವಿಷ್ಯಪುರಾಣ, 55.ಶಂಖಲಿಖಿತಸ್ಮೃತಿ, 56.ಬೃಹದಾರಣ್ಯಕೋಪನಿಷತ್ ಮತ್ತು ಭಾಷ್ಯ, 57. ಕೃಷ್ಣಾಮೃತಮಹಾರ್ಣವ, 58. ಬ್ರಹ್ಮಾಂಡಪುರಾಣ, 59. ವ್ಯಾಸಸ್ಮೃತಿ, 60.ವಿದೇಶಯಾತ್ರಾ ಶಾಸ್ತ್ರೀಯಪಕ್ಷ - ಕರಪಾತ್ರಜೀ, 61.ಪೂರ್ವಮೀಮಾಂಸಾ ವಾರ್ತಿಕ, 62.ಶಾಸ್ತ್ರದೀಪಿಕಾ, 63. ಋಗ್ವೇದ, 64. ಮಹಾಭಾರತ ಮೊದಲಾದವು.

- - - - -

॥ ಶ್ರೀಮಧ್ವೇಶಾರ್ಪಣಮಸ್ತು ॥



कृष्णसारस्तु चरति मृगो यत्र स्वभावतः।
सज्ञेयो याज्ञियो देशः म्लेच्छदेशस्त्वतः परः॥ 2.23 मनुस्मृति

Blackbuck (Antilope cervicapra) is a species of antelope found ***mainly in India***, but also in parts of Pakistan and Nepal. There are also ***introduced*** populations in various parts of the world including numerous ranches in Texas in the United States of America; free-ranging populations also exist in Argentina (pampas in southern Buenos Aires, Santa Fe and Entre Ríos provinces).

Local names for the species include Kala hiran, Sasin, Iralai Maan and Krishna Jinka

SOURCE: http://en.wikipedia.org/wiki/Blackbuck